


ದಶವರ್ಷ ಸಂಭ್ರಮದ ಪುಸ್ತಕ ಮಾಲಿಕೆ 2021

# ಚೆಂಬಿ

ಲಲಿತ ಪ್ರಬಂಧ

**ಬಾರಿಯಂಡ ಜೋಯಪ್ಪ**



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಮಡಿಕೇರಿ

Decennial Year Publication Series 2021

# ಚೆಂಚಿ
## CHENCHI

Written by
**Bariyanda Joyappa**
Madenadu, Madikeri Taluk, Kodagu - 571201
Mob : 9481770584



ಪ್ರಕಟಣೆ :
**ರಿಜಿಸ್ಟ್ರಾರ್**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಪುಸ್ತಕ ದೊರೆಯುವ ಸ್ಥಳ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಕಾಫಿಕೃಪಾ ಬಿಲ್ಡಿಂಗ್, ರಾಜಾಸೀಟ್ ರಸ್ತೆ, ಮಡಿಕೇರಿ
ದೂ: 08272-223055, ಮೊ : 6362522677
arebaseacademy@gmail.com,
https://arebhasheacademy.karnataka.gov.in

ಪ್ರಕಟಣೆಯ ವರ್ಷ : 2022



ಪುಟಗಳು : 104
ಬೆಲೆ : ರೂ. 100
ಪ್ರತಿಗಳು : 300

ಆಕಾರ : ಡೆಮಿ 1/8
ಕಾಗದ : 80 ಜಿಎಸ್‌ಎಂ ಮ್ಯಾಪ್ಲಿತೋ

ಪುಟ ವಿನ್ಯಾಸ ಮತ್ತು ಮುದ್ರಣ :
**ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,**
ಪೂಜಾ ಆರ್ಕೆಡ್, ಜೂನಿಯರ್ ಕಾಲೇಜು ರಸ್ತೆ, ಮಡಿಕೇರಿ.
Ph. 08272-224919, 9448135592

# ಮುನ್ನುಡಿ

ಸಾಹಿತ್ಯ ಲೋಕಕ್ಕೆ ಹೆಗ್ಗಳ್ಮೆನ ಕೃತಿಗಳ ಕೊಡುದರ್ಲಿ ನನ್ನ ಆತ್ಮೀಯ ಜೋಸ್ತಿ ಶ್ರೀ ಬಾರಿಯಂಡ ಜೋಯಪ್ಪನವು ಎತ್ತಿದ ಕೈ. ಅವರ ಸುರುನ ಪುಸ್ತಕ "ಯಾರ ಬೇಟೆ ಮತ್ತು ಇತರ ಪ್ರಸಂಗಗಳು" ಕನ್ನಡಲಿ ಅದೊಂದು ಮಾನವೀಯ ನೆಲೆನ ಹೃದಯಸ್ಪರ್ಶಿ ಪ್ರಸಂಗಗಳ ಪುಸ್ತಕ. ಆ ಮೇಲೆನ ಅವರ "ಕಾಟಿಬೆಟ್ಟದ ಕತೆಗಳು" ಕೂಡಾ ಒಂದು ವಿಸೇಸ ಕೃತಿ, ಐವತ್ತು ಅರುವತ್ತು ವರ್ಸಗಳ ಹಿಂದೆನ ಕಾಡ್ನ ರೋಮಾಂಚಕ ಅನುಭವಗಳ ಪಿಂಚಣಿ ಆದಮೇಲೆ ಬಾಲ್ಯದ ಕಣ್ಣ್ ಲಿ ಕಂಡ್ ಬರ್ದ ಬರ, ಅದೊಂದು ಸಂಸ್ಕೃತಿ ಕಥನ. ಹಂಗೆ ಅವರ ಅರೆಬಾಸೆ ಸಣ್ಣ ಕತೆಗಳ ಸಂಗ್ರಹ "ಚಾಂಪಾ" ಅರೆಬಾಸೆನ ಸುರೂನ ಕತಾ ಸಂಕಲನಂತ ಹೇಳುವ ಹೆಗ್ಗಳಿಕೆ ಪಡ್ದದ್. ಅವರ "ತೋರಣ" ಂತ ಹೇಳ್ವ ಅರೆಬಾಸೆನ ಕವನ ಸಂಗ್ರಹಂದ ಆರ್ಸಿದ "ಜೋಡಿ ಹಕ್ಕಿ" ಮತ್ತೆ "ಉದಯ ರಾಗ" ಪದ ಮಾಲೆನ ಕೇಳದವೇ ಇರಿಕಿಲೆ. ಈಗ ಮತ್ತೊಂದು ಅಪ್ರೂಪದ ಲಲಿತ ಪ್ರಬಂಧಗಳ ಸಂಕಲನವೇ ಈ "ಚೆಂಚಿ".

ಈ ಲಲಿತ ಪ್ರಬಂಧ ಸಂಕಲನ "ಚೆಂಚಿ" ಗೆ ಯಾರ ಮುನ್ನುಡಿ, ಹಿನ್ನುಡಿ, ಬೆನ್ನುಡಿ ಯಾವುದೂ ಅಗತ್ಯ ಇಲ್ಲೆ. ಕೊಡ್ಗ್ ನ ಅಪ್ಪಟ ಅರೆಬಾಸೆಲಿ ಬರೆವ ಜೋಯಪ್ಪನವು ಸರಳ, ಸುಂದರ, ಲಾಲಿತ್ಯ ಪೂರ್ಣಾಗಿ ಕಣ್ಣಿಗೆ ಕಟ್ಟುವಂತ ವರ್ಣನೆ ಮಾಡೊವು. ಕೊಡ್ಗ್ ಅಂದ್ನ ಹಳ್ಳಿ ಮನೆನ ವರ್ಣನೆ ಮಾಡ್ದ ಪೊರ್ಲ್ ನೋಡಿ "ಹಿಂದೆಲ್ಲಾ ಒಂದು ಕೊತ್ತಿ, ಚೈಗೂಡಿಕೆ ಒಂದೆರ್ಡ್ ನಾಯಿಗ, ಕೊಟಗೂಡಿಕೆ ನಾಕ್ ಕೋಳಿಗ, ಸೂರ್ ಕೆಳಗೆ ಪಳ್ಳ ಬೀಳಿಕೆ ಒಂದೋ ಎರ್ಡೋ ಹಂದಿಗ, ನಾಕ್ ನಡೆ ದನಂಗ, ಡಜನ್ ಗೆ ನಾಕ್ ಕಮ್ಮಿಂತೇಳುವಸ್ಟ್ ಮಕ್ಕಳೂ ಇರ್ತಿದ್ದೊ, ಮರ್ಣ್ದೊ, ನೆರಿಕೆದೋ ಗೋಡೆ, ಹುಲ್ಲ್ ನ ಹೊದಿಕೆ"!

ಹಿಂದೆ ಚೆಂಚಿ ಸೊಂಟಲಿ ಕೋಸಿಕಂಡ್ ಇದ್ದ ಅಜ್ಜಿಕಂದೊಳೂ ಪೊರ್ಲುಲಿ ಜೋಯಪ್ಪನವು ಯಾವ ಯಾವ ಕಾಯಿಲೆಗೆ ಯಾವ ಮೊದ್ದುಂತ ಅಂದ್ನ ಹಳ್ಳಿ ಮೊದ್ದುಗಳ ವರ್ಣಿಸಿವೆ. ಉಮಿಕರಿಲಿ ಉಪ್ಪು ಸೇರ್ಸಿಕಂಡ್ ಹಲ್ಲ್ ಉಜ್ಜುತಿದ್ದ ಅರುವತ್ತು ದಾಟಿದವೂ ಚಕ್ಕುಲಿನ ಕರುಂ ಕುರುಂ ತಿಂಬತಿದ್ದೊ,

ಎಳ್ಳ್ ಉಂಡೆನೂ ಕಟುಂ ಕುಟುಂತ ಅಗೆತಿದ್ದೊ. ಅಜ್ಜಿಕ ಸೂಜಿಗೆ ನೂಲು ಹಾಕ್ತಿದ್ದೊ ಇದೆಲ್ಲಾ ಅವರ ಆರೋಗ್ಯಕ್ಕೆ ಹಿಡ್ದ ಕನ್ನೆಡಿಂತ ಹೇಳುವೆ.

ಎಪ್ಪತ್ ಎಂಬತ್ತ್ ವಯಸ್ಸಾದ ಹಿರಿಯರ್‌ಂದ ಅವರ ಅನುಭವ ಕೇಳಿ ತಿಳಿಯೊಕುಂತ ಹೇಳುವ ಜೋಯಪ್ಪನವು "ಚಿದಂಗ್ ಇಕ್ಕಿಕಾಗದ್, ಕಡ್ಪದಾಟಿಕಾಗದ್" ಇದ್ ಹಿರಿಯರ್ ಮಾಡ್ದ ಕಟ್ಟ್ ಪಾಡ್‌ಂತ ತಿಳ್ಸುವೆ. ಹಂಗೆ ಪುಸ್ತಕ ಮೆಟ್ಟುದಾಗಿ ಹರೆದಾಗಲಿ, ನೆಲಲಿ ಇಸುದಾಗಲಿ ಮಾಡಿಕೆ ಬೊತ್ತು, ಯಾಕೇಂತೇಳ್ರೆ ಅದ್ ಸರಸ್ವತಿ, ಹಂಗೆ ಮಾಡಿರೆ ವಿದ್ಯೆ ಹತ್ತುದುಲೆ. ಇನ್ನು ಒಲೆ ತಿಂಟೆ, ಕಡೆವ, ಬೀಸುವ ಕಲ್ಲ್, ನರ್ಗುಳಿ ಇದರೆಲ್ಲಾ ಮೆಟ್ಟಿಕಾಗದ್, ಇದೆಲ್ಲಾ ಅವ್ವನ ಎದೆಗೆ ಸಮತೇಳುವ ಗೌರವ. ಇಂತಾ ಹಲವು ಕಟ್ಟ್ ಪಾಡ್, ನಂಬಿಕೆ, ಸಂಪ್ರದಾಯಗಳ ವಿವರ್ಸುವೆ. ಹಿಂದೆನವರ ನಡೆ ನುಡಿಂತೇಳಿರೆ "ಚಿನ್ನದಂತಾ ಪೆಟ್ಟಿಗೆ, ಚಿನ್ನಾರಿ ಪೆಟ್ಟಿಗೆ, ಮುಚ್ಚೊಳ ತೆಗ್ದರೆ ಮುನ್ನೂರು ಪೆಟ್ಟಿಗೆ" ಹೌದು, ಆದರೆ ಮುಚ್ಚೊಳ ತೆಗೆವ ಮನ್ಸ್ ನಾವ್ಗೆ ಬೇಕು ಅಸ್ಟೆ.

ಬೇಸಾಯ ಮಾಡಿ ಉಂಬತಿದ್ದ ಜೆನ ನಾವು. ನಮ್ಮ ಬೇಸಾಯದ ರೀತಿ ನೀತಿಗಳ ಜೋಯಪ್ಪನವು ಸೊಗಸಾಗಿ ವರ್ಣಿಸುವೆ. ರೈತಂಗೆ ಬೇಕಾದ ಸಲಕರಣೆಗಳ ರೈತನೇ ಮಾಡ್ಕಂಬತಿತ್ತ್, ಅವಂಗೆ ಯಾವ ತರಬೇತಿನೂ ಇತ್ಲೆ, ಸರ್ಟಿಪಿಕೇಟ್‌ನೂ ಬೇಕಾಗಿತ್ಲೆ, ನೋಡಿ ತಿಳಿ, ಮಾಡಿ ಕಲಿಂತೇಳುವ ತತ್ವ ಅವಂದ್ ತ ಹೇಳ್ವೆ. ಅಂದ್ನ ಹೂಡುವ ಎತ್ತುಗ ಸಾ ಮೊನ್ಸರ್‌ಂದಲೂ ಹೆಚ್ಚಿ ತಿಳ್ದವರಾಂಗೆ ಬೊಳ್ಪಾಕೆ ಮುಂದೆ ಹಟ್ಟಿಗೆ ಹೋದರೂ ಸಾಕ್ ಹೂಟೆ ಎತ್ತುಗ ಮಾತ್ರ ಎದ್ದ್ ನಿತ್ತ್, ಉಚ್ಚೆ ಹೊಯ್ದ್, ಸೆಗ್ಣಿ ಹಾಕಿ ಹೂಡಿಕೆ ಹೋಕೆ ತಯಾರಾಗಿ ನಿತ್ತ್ ಕಂಬೊತ್ತಿದ್ದೊಂತ ಹೇಳುವೆ. ಇನ್ನು ಹೂಟೆ, ಬೀಜ ಹಾಕುದು, ಅಗೆ ಕೀಳ್ದು, ನಾಟಿ ನೆಡ್ದು, ಪೈರ್ ಬೆಳೆವ ರೀತಿ, ಕೊಯ್ಲ್, ಬೆಳೆ ಹೊರ್ದು, ಮೆದೆ ಬುಡ್ದು, ಒಕ್ಲು ಕೆಲ್ಸ ಇದರ್ನೆಲ್ಲಾ ಬಾರಿ ಲಾಯಿಕ್ಲಿ ವಿವರ್ಸಿವೆ. ಮತ್ತೊಂದು ಕಡೆ ದುಡ್ಡುನ ಇಕ್ಕಟ್ಟಿಗೆ ಕರ್ ಬುಡುವ ಹಸುನ ಮಾರ್ವ ಸಂಕಟನ ಓದುಗರೂ ಸಂಕಟ ಪಡುವಾಂಗೆ ಕಟ್ಟಿ ಕೊಡುದರ ನೋಡಿ "ಹಾಲ್ ನೊರೆ ನೊರೆಯಾಗಿ ಚೊಂಬು ತುಂಬಿತ್, ಹಂಗೆ ಅವ್ವನ ಕಣ್ಣ್ ಲಿ ನೀರೂ ತುಂಬಿತ್, ಮಕ್ಕ ಕುಸು ಕೂಡಿಕಂಡ್ ಕಣ್ಣ್ ನ ಸೀಟಿಕಂಡ್ ಮೂಲೆಲಿ ಕುದ್ದಿದ್ದೊ. ಮನೆಯವು ಯಾರೂ

ಯಾರೊಟ್ಟಿಗೂ ಮಾತಾಡದೆ ಇಡೀ ಮನೆ ಮೌನ ಆಗಿತ್., ಕೊತ್ತಿ ಸಾಯಂಕಾಲದ ಹಾಲ್ ನ ಗ್ಯಾನ ಮಾಡಿಕಂಡ್ ಕುದ್ದಂಗೆ ಜಗಲ್ ಮೂಲೆಲಿ ಕುದ್ದಿತ್, ನಾಯಿಗ ಮಾತ್ರ ಬೊಗ್ಳುದು ನಿಲ್ಸಿ ಹಸ್ ಹೋದ ದಾರಿ ಕಡೆ ನೋಡಿಕಂಡ್ ಕುಂಯಿಗುಟ್ಟಿಕಂಡ್ ಸಂಕಟ ಪಡ್ತಿದ್ದೊ!" ಹುಲ್ಲುನ ಮನೆ ಬದ್ಕ್ ಸುಖದ ಬದ್ಕ್ಂತ ಹೇಳುವ ಜೋಯಪ್ಪನವು "ಮಳೆ ಗಾಲಲಿ ಮಳೆ ಹನಿ ಬೀಳುವ ಸದ್ದೂ ಕೇಳ್ದುಲೆ, ಮನೆ ಸೋರ್ದೂ ಇಲ್ಲೆ.  ಚಳಿಗಾಲಲಿ ಬೆಚ್ಚಂಗೆ ಇದ್ದರೆ, ಬೇಸಿಗೆಲಿ ತಂಪಾಗಿದ್ದದೆ." ಇನ್ನು ಇಂತಾ ಮನೆಗಳ ಕಟ್ಟುವ ಕ್ರಮಗಳ  ಹೇಂಗೆ ಬರ್ದವೇಂತ ಹೇಳ್ರೆ ಬೇಕಾರೆ ನೀವೂ ಒಂದು ಅಂತಾ ಮನೆ ಮಾಡಕ್! ಯಾರ್ ಮಾಡುವ ಹೇಳಿ "ಅಂದಿಗೆ ಅದೇ ಸುಖ, ಇಂದಿಗೆ ಇದೇ ಸುಖ "ಂತ ಹೇಳುವೊ.  ಮನೆ ಮಾತ್ರ ಅಲ್ಲ ಅಡಿಗೆ, ಊಟ, ತಿಂಡಿಗಳ್ನೂ ಬಾಯಿಲಿ ನೀರ್ ಬರುವಾಂಗೆ ವರ್ಣಿಸುವೆ.  ಯಾವ ಸಂಪರ್ಕ ಸಾಧನವೂ ಇಲ್ಲದ ಕಾಲಲಿ ವರ್ಸಕ್ಕೆ ಒಂದೋ ಎರ್ಡೋ ಬರೆವ ಕಾಗದಲಿ ಇಡೀ ಮನೆ ಸಮಾಚಾರ ಕೋಳಿ ಹಂದಿಗಳ ಸುದ್ದೀಂದ ಹಿಡ್ದ್ ಊರುನ ಕತೆನೂ ಇರ್ತಿತ್.

ಮೊನ್ನನ ಬೊದ್ಕುಲಿ ಮೊದುವೆ ಒಂದು ಮಹತ್ತರ ಘಟ್ಟ. ಆ ಮೊದುವೆನ ಬಾಕಿ ಎಲ್ಲಾ ವಿಸಯಗಳ್ಂದಲೂ ಹೆಚ್ಚಿಗೆ ಎಂಟತ್ತ್ ಪುಟಲಿ ವರ್ಣಿಸುವೆ. ಮೊದುವೆಗೆ ಗೂಡೆ ನೋಡಿಕೆ ಹೋವ ಕ್ರಮಂದ ಹಿಡ್ದ್, ಚಪ್ಪರ, ಮೂರ್ತ, ದಂಪತಿ ಮೂರ್ತ, ಅಕೇರಿನ ನೀರ್ ಮೊದುವೆ ವರೆಗೆ ಸವಿವರವಾಗಿ ವಿವರ್ಸುವೆ. ಮೊದುವೆಲಿ ಎಲ್ಲವು ಹೆಚ್ಚಿ ಕುಸಿ ಪಡ್ದು ವಾಲಗ ಕೊಣ್ತತಾನೆ?  ವಾಲಗಕ್ಕೆ ತಕ್ಕ ಹಾಂಗೆ ಕೊಣಿದು ಒಂದು ಕಲೆ, ಕೆಲವರ ಕೊಣ್ತ ನೋಡ್ದೇ ಒಂದು ಪೊರ್ಲು. ನಡೆಕೆ ಕಲ್ತ ಮಕ್ಕಳ್ಂದ ಹಿಡ್ದ್ ನಡೆಕೆ ತಾಕತ್ ಇರುವ ಹಿರಿಯವುಸನ ಕೊಣಿತಿದ್ದೊ.  ನಡು ವಯಸ್ನವರ ಕೈಲಿ ಗಲಾಸ್ ಇರ್ತಿತ್, ಗಲಾಸ್ಲಿ ಇರುವ ಕಳ್ಳ್ ಒಂದು ತುಳಿ ತುಳ್ಕದಾಂಗೆ ಎಚ್ಚರ ವಹಿಸಿಕಂಡ್ ಒಂದೊಂದೇ ಗುಟುಕು ಕುಡ್ಕಂಡ್ ಕೊಣಿತಿದ್ದೊ. ಮತ್ತೆ ಕೆಲವು ಬೀಡಿನೋ ಸಿಗರೇಟ್‌ನೋ ಸೇದಿಕಂಡ್ ಹೆಜ್ಜೆ ಹಾಕ್ತಿದ್ದೊ, ಯಾರ್ಯಾರಿಗೋ ಮುಟ್ಟಿರೂ ಗೊತ್ಲೆ, ಸುಟ್ಟರೂ ಗೊತ್ಲೆ, ಹೆಟ್ಟಿಕಂಡ್, ಕುಟ್ಟಿಕಂಡ್ ಮೆಟ್ಟಿಕಂಡ್, ರಟ್ಟಿಕಂಡ್ ಕೊಣೆತಿದ್ದೋಂತ ಬಾರೀ ಲಾಲಿತ್ಯ ಪೂರ್ಣವಾಗಿ ವರ್ಣಿಸುವೆ. ಇನ್ನು ಕೊಣ್ತಲಿ ಹಾವಾಟ ತರದ ಕೊಣ್ತನ

ವರ್ಣಿಸಿದ ಪೊರ್ಲುನ ಓದೊಕು. ವಾಲಗ ಉರ್ಗುದು, ಡೋಲು ಬಾರ್ಸುದು ಈ ಕೊಣ್ತಗ ಎಲ್ಲಾ ಒಂದು ಜಾನಪದ ಕಲೆ, ನೋಡೊವುಕೆ ಕುಸಿ, ನೆಗೆ. ಕೆಲವು ಸತಿ ನೆಗೆ ಹೊಗೆ ಆಗಿ ಬುಟ್ಟದೆ, ಎಲ್ಲೋ ಹುಟ್ಟಿಕಂಡ ಸಿಟ್ಟ್ ಇನ್ನೆಲ್ಲೋ ರಟ್ಟಿ ಮೊದುವೆ ಜಂಬರ ಗೋಳಾದೂ ಉಟ್ಟೂಂತ ಹೇಳುವೆ. ಇನ್ನು ಮೊದುವೆಲಿ ಹೆಣ್ಣ್ ಕರ್ಕಂಡ್ ದಿಬ್ಬಣ ಬಾದರ ವರ್ಣನೆ ನೋಡಿ "ಕಾಡ್ ದಾರಿ, ಗದ್ದೆ ಏರಿ, ತೋಡ್ ಇಳ್ದ್, ಕಡ್ಕಲ್ ಹತ್ತಿ, ಎಡ್ಗಿಕಂಡ್, ರಟ್ಟಿಕಂಡ್ ಹೆಣ್ಣ್ ಕರ್ಕಂಡ್ ಬಾಕನ ಕೋಳಿ ಕೂಂಗುವ ಹೊತ್ತಾತಿತ್. ಮತ್ತೆ ಬೆಳಿಗ್ಗೆ ಹತ್ತ್ ಹತ್ತುವರೆಗೆ ದಂಪತಿ ಮೂರ್ತ. ಗೂಡೆದ್ ಗೋಳು., ಯಾಕೆತೇಳ್ರೆ ಗೂಡೆ ಮನೆಲಿ ಒಂದು ಚಪ್ಪರ, ಮಾರ್ನೆಗೆ ಮೂರ್ತ, ಅದೇ ಇರ್ಲ್ ದಿಬ್ಬಣ, ಅದೋ ಕಾಡ್ ದಾರಿಲಿ ನಡ್ದೇ ಹೈದನ ಮನೆ ಸೇರ್ದು., ಮತ್ತೆ ದಂಪತಿ ಮೂರ್ತ, ಅಷ್ಟೇ ಅಲ್ಲ ಗದ್ದೆಗೆ ಗೊಬ್ಬರ ಹೊರೊಕು, ಬಾಕನ ನೀರ್ ತರೊಕು. ಈ ಎಲ್ಲಾ ಶಾಸ್ತ್ರ ಆಕನ ಗೂಡೆ ಕಟ್ಟದ ಕೋಳಿನಾಂಗೆ ಒರ್ಗಿ ನಿಲ್ಲಕೂ ತ್ರಾಣ ಇಲ್ಲದಷ್ಟ್ ಸುಸ್ತಾಗಿದ್ದದೆ "ಹೀಂಗೆ ಎಲ್ಲದರ ವಿವರ್ಸುವೆ. ಇನ್ನು ಮೊದುವೆಲಿ ಕೊಣ್ತದೊಟ್ಟಿಗೆ ಕುಡ್ತನೂ ಇದ್ದದೆ ತಾನೆ? ಸುಮಾರ್ ಅರುವತ್ತ್ ಎಪ್ಪತ್ತ್ ವರ್ಸಗಳ ಹಿಂದೆ ಮೊದುವೆ ಚಪ್ಪರದ ಊಟಕ್ಕೆ ಕಳ್ಳ್ ಕುಡೆಕೆ ಕೊಡುವ ಪದ್ಧತಿ ಇತ್ತ್ಲೆ ಗಡ. ಆ ಮೇಲೆ ಊಟ ಮಾಡಿಕನ ಕಳ್ಳ್ ಕೊಡಿಕೆ ಸುರಾತ್, ಬೈನೆ ಕಳ್ಳ್, ನಾಡ್ ಸರಾಯಿ, ಬತ್ತದ ಸರಾಯಿ, ಗೇರ್ ಹಣ್ಣ್ ಸರಾಯಿ ಇದ್ದದ್ ಕಾಲ ಕಳೀತಿದ್ದಾಂಗೆ ಕಾಟಿ ಸರಾಯಿ ಬಾತ್ ಗಡ, ಅದ್ ಹೋಗಿ ರಮ್ಮ್, ವಿಸ್ಕಿ, ಬ್ರಾಂಡಿಂತೆಲ್ಲಾ ಬಾತ್, ಇದೆಲ್ಲಾ ಚಪ್ಪರದ ಊಟಕ್ಕೆ ಮಾತ್ರ ಇದ್ದದ್, ಮತ್ತೆ ಮೂರ್ತದ ಮಧ್ಯಾಹ್ನದ ಊಟಕ್ಕೂ ಕೊಡಿಕಿ ಸುರಾತ್. ಅಷ್ಟೇ ಅಲ್ಲ ಈಗೀಗ ಮೂರ್ತದ ದಿನ ಸನ "ಓಪನ್ ಬಾರ್" ಇದ್ದದೆ. ಅದೊಂದು ರೀತಿನ ಪ್ರತಿಷ್ಠೆ ಆಗೋಗುಟು. ಕೈಲಿ ಗಲಾಸ್ ಇಲ್ಲದವರ ಹುಡ್ಕಿಕಾದೆ. ಮುಂದೆ ಅದ್ ಎಲ್ಲಿಗೆ ಬಂದ್ ನಿತ್ತದೆಯೋ ಏನೋಂತ ಜೋಯಪ್ಪನವು ನಮ್ಮ ಸಮಾಜದ ಬಗ್ಗೆ ಕಳಕಳಿ ವ್ಯಕ್ತ ಪಡ್ಸುವೆ.

ನಮ್ಮದ್ ಹತ್ತ್ ಕುಟುಂಬ ಹದಿನೆಂಟ್ ಬಳಿ ತಾನೆ? ಹಂಗೆ ಜೋಯಪ್ಪನವು ಪಂಡ್ನ ಕಾಲದ ಯಾವುದರೂ ಬುಡ್ದುಲೆ, ಹದಿನೆಂಟ್ ವಿಸಯಗಳ ಬಗ್ಗೆ ವಿವರ್ಸುವೆ. ಬೇಟೆನ ವರ್ಣನೆ ಮಾಡ್ಕನ ಬೇಟೆನ ನಾನಾ ರೀತಿಗಳ, ಅಂದ್ನ ಬೇರೆ ಬೇರೆ ನಮೂನೆನ ಬೆಡಿಗಳ, ಕಾಡ್ ಪ್ರಾಣಿಗ ಯಾವ ಯಾವ

ಜಾತಿಯವು ಇದ್ದೊಂತೆಲ್ಲಾ ತಿಳ್ಸುವೆ. ಹಂಗೆ ಜನ ಸಂತೆಗೆ ಹೊರ್ಡ್ತಿದ್ದ ಸಂಭ್ರಮ, ಸಂತೆಲಿ ಜಾತ್ರೆನ ಗೌಜಿ, ಸಾಮಾನ್ ತಕಂಡ್ ಬರುವ ಪಾಡ್ನೆಲ್ಲಾ ತಾನೇ ಅನುಭವಿಸಿದಾಂಗೆ ಹೇಳುವೆ. ಇನ್ನು ಕಾಡ್ನ ಬಗ್ಗೆ ಬರಿಯಕನ ಕಾಡ್ಲಿ ಇದ್ದ ಮರಗಳ ಹೆಸ್ರ್, ಆಗ ಸಿಕ್ಕ್ ತಿದ್ದ ತರತರದ ಹಣ್ಣ್ ಗ, ಗೆಂಡೆ ಗೆಣ್ಸ್ ಗ ಎಲ್ಲವೂ ಇದ್ದದೆ. ಮತ್ತೆ ಆಗನ ಸಾಲೆನ ಕತೆ ಹೇಳ್ದೇ ಬೇಡ. ಮಕ್ಕ ಸಾಲೆಗೆ ನಡ್ಕಂಡ್ ಹೋತಿದ್ದ ಪಾಡ್, ಕಾಡ್ದಾರಿಲಿ ಹೋಕನ ಸಿಕ್ಕ್ ತಿದ್ದ ಪ್ರಕೃತಿನ ಪಾಠ. ಮಕ್ಕಳಿಗೆ ನಾಟಿ, ಕೊ೦ಯ್ಲ್ ಸಮೆಲಿ ರಜೆ ಸಿಕ್ಕಿ ಮನೆವುಕೆ ಸಹಾಯ ಆತಿದ್ದದ್, ಮಕ್ಕಳೂ ಆ ಕೆಲ್ಸಗಳ ಕುಸೀಂದ ಕಲಿಯತಿದ್ದದರ ಹೇಳುವೆ. ಆದರೆ ಸಾಲೆಲಿ ಕೆಲವು ಮಾಸ್ಟ್ರ ಗ ಕೊಡ್ತಿದ್ದ ಇಪರೀತ "ಹೋಂ ವರ್ಕ್" "ಇಂಪೊಜಿಸನ್" ಗಳ್ಂದ ಮಕ್ಕಳಿಗೆ ಕಲಿಕೆನ ಆಸಕ್ತಿನೇ ಇಲ್ಲದಾಂಗೆ ಆತಿದ್ದದರ ತಿಳ್ಸಿ, ಮಾಸ್ಟ್ರ ಗ ಮಕ್ಕಳ ಮನಃಶಾಸ್ತ್ರನ ತಿಳ್ಕಣೊಕೂಂತ ಕೆಬಿಮಾತ್ ಹೇಳುವೆ. ಸಾಮಾನ್ಯರಿಗೆ ಮನೆಲಿರುವ ಮಣೇಂತ ಹೇಳ್ರೆ ದೊಡ್ಡ ಸಂಗತಿನೇ ಅಲ್ಲ. ಆದರೆ ನಮ್ಮ ಜೋಯಪ್ಪನವು ಮಣೆ ಇಲ್ಲದ ಮನೆ ಇಲ್ಲೆಂತ ಹೇಳಿ ಅದರ ಮಹತ್ವನ ಹೇಳುವೆ. ಆಕೇರಿ ಭಾಗಲಿ ಆಗನ ಕಾಲಲಿ ಮೊನ್ಸರಿಗೆ ಸಿಕ್ಕ್ ತಿದ್ದ ಮನೋರಂಜನೆ, ಹಳ್ಳಿ ಹೈದ ಸಿನೆಮ ನೋಡಿಕೆ ಪೇಟೆಗೆ ಹೋಗಿ ಪಟ್ಟ ಪಾಡ್, ಸಾಕಪ್ಪಾ ಸಾಕ್ ಈ ಪೇಟೆ, ಸಿನೆಮಂತ ಹೇಳುವಾಂಗೆ ಆದರ ಎಲ್ಲಾ ತಾನೇ ಅನುಭವಿಸಿದಾಂಗೆ ಬರ್ದೊಳೊ. ಅವು ಬರ್ದ ಅನೇಕ ವಿಚಾರಗಳ ಬಗ್ಗೆ ನಾ ಹೆಚ್ಚ್ ಹೇಳಿಕೆ ಹೋದುಲ್ಲೆ, ಯಾಕೇಂತ ಹೇಳ್ರೆ ಅವರ ಚೆಂಚಿ ಬರೇ ಚೆಂಚಿಯಲ್ಲ, ಜೋಳಿಗೆನೂ ಅಲ್ಲ, ದೊಡ್ಡ ಪತ್ತಾಯ. ಅದರಲ್ಲಿರುವ ಸಂಪತ್ತ್ ನ ಅವುಕೆ ಅವುಕೆ ಬೇಕಾದಾಂಗೆ ಹೆರ್ಕಿಕಂಬಕೆ ಓದುಗಂಗೇ ಬುಟ್ಟೊಳೆ. ಜೋಯಪ್ಪನವರ ಈ ಚೆಂಚಿಲಿರುವ ಕೆಲವು ಸಂಗತಿಗ ಮಡಿಕೇರಿ ಆಕಾಶವಾಣಿ ಮೂಲಕ "ಜೋಳಿಗೆ" ಂತ ಹೇಳುವ ಹೆಸ್ರ್ ಲಿ ಪ್ರಸಾರ ಆದ್ದರ ಹಲವು ಆಸಕ್ತರ್ ಕೇಳಿ ಕುಸಿ ಪಟ್ಟಿರುವೊ, ಆದರೆ ಈಗ ಮತ್ತಷ್ಟ್ ಸಂಗತಿಗಳ ಹೊತ್ತ್ ಪುಸ್ತಕ ರೂಪಲಿ ಬಾತಾ ಉಟ್ಟು. ಇದರ ಮತ್ತಷ್ಟ್ ಪ್ರೀತಿಂದ ಕುಸಿ ಕುಸಿಲಿ ಸ್ವೀಕರಿಸುವರಿಂತ ನಂಬಿಯೊಳೆ.

ನಮ್ಮ ಜೋಯಪ್ಪನವು ಈ "ಚೆಂಚಿ" ನ ಮೂಲಕ ನಮ್ಮ ಸಂಸ್ಕೃತಿನ ಸಾಗರಲಿ ಅಡ್ಂಗಿರುವ ಮುತ್ತು, ರತ್ನಗಳ ಹೆರ್ಕಿ ತೆಗ್ದೊಳೊ. ನಮ್ಮ ಪಂಡ್ ನ ರೀತಿ ನೀತಿಗಳ, ಕಟ್ಟ್ ಪಾಡ್ಗಳ, ಸಂಪ್ರದಾಯ ನಂಬಿಕೆಗಳ ನಿಪುಣತೆಂದ

ಕಟ್ಟಿಕೊಟ್ಟೊಳೊ. ಇದರೊಟ್ಟಿಗೆ ಅರೆಬಾಸೆನ ಅನನ್ಯತೆನ ಎತ್ತಿ ತೋರ್ಸುವ ಹಲವಾರ್ ಪದಗ ಇವರ ಅರೆಬಾಸೆನ ಹಿಡ್ತಕ್ಕೆ ಸಾಕ್ಷಿ ಆಗುಟ್ಟು. ಸಂಸ್ಕೃತಿ ಮತ್ತೆ ಸಾಹಿತ್ಯ ಒಂದಕ್ಕೊಂದು ಪೂರಕ, ಸಾಹಿತ್ಯ ಬೆಳ್ದರೆ ಮಾತ್ರ ಬಾಸೆ ಒಳಿಯಕೆ ಸಾದ್ಯಂತ ನನ್ನ ಅಭಿಪ್ರಾಯ. ಇವರ ವಿಸಯ ನಿರೂಪಣೆಲಿ ಬರುವ ಅಪ್ಪಟ ಅರೆಬಾಸೆ ಪದಗಳ ಒಮ್ಮೆ ನೋಡಿ "ಗೋರ್ಜಿ ಗದ್ದೆ, ಸೋಲೆ ಗದ್ದೆ, ಉಯ್ಯಪಾರ್, ಕಣಿಕೋಲು, ತಮ್ಮಿಹಗ್ಗ, ಮೇಚಿ, ದೋಂಬಾದು, ಚುಗ್ಗುದು, ಪರ್ಪುಲ್, ಬೇಟಿ, ಪಾತುದು, ಉಕ್ಕುಡೆ, ಮೋಂದಾಯ, ಅಂಜರ, ಚದಲೆ, ಕಚಾಯಿಸ್, ಕೊಂಬಟೆ ಹಲ್ಲ್, ಎಣೆ ಮಕ್ಕ" ಹೀಂಗೆ ಅರೆಬಾಸೆ "ಸೊಗಡುನ" ಅನೇಕ ಪದಗ ಒಳೊ. ಇಂತಾ ಪದಗಳ ಇಂದ್ನ ಯುವ ಪೀಳಿಗೆಗೆ ಖಂಡಿತಾ ಗೊತ್ತಿರ್ಕಿಲ್ಲೆ. ಅರೆಬಾಸೆ ಒಳಿಯಕೆ, ಬೆಳಿಯಕೆ ಇಂತ ಪುಸ್ತಕಗಳ ಕೊಡುಗೆ ಅನನ್ಯವಾದೆ. ಜೋಯಪ್ಪನವರ ಲೇಖನಿಂದ ಇನ್ನೂ ಅನೇಕ ಅರೆಬಾಸೆ ಕೃತಿಗ ಬೆಳಕ್ ಕಾಣಲಿಂತ ಹಾರೈಸೊಮೊ.

ಇವರ ಈ "ಚೆಂಚಿ" ಪುಸ್ತಕಕ್ಕೆ ಮುನ್ನುಡಿ ಬರೆವ ಗೌರವನ ನಂಗೆ ಕೊಟ್ಟ ಪ್ರೀತಿ, ವಿಶ್ವಾಸ, ಅಭಿಮಾನಕ್ಕೆ ನಾ ಋಣಿ. ಶ್ರೀಯುತ ಜೋಯಪ್ಪನವುಕೆ ಶುಭಾಶಯಗ.

ಅಮೃತಹಳ್ಳಿ,
ಬೆಂಗಳೂರು. **ಪಿ.ಜಿ. ಅಂಬೆಕಲ್**

# ಅಧ್ಯಕ್ಷರ ಮಾತ್

ಕರ್ನಾಟಕ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಯ ಪುಸ್ತಕ ಪ್ರಕಟಣಾ ಯೋಜನೆಡಿಲಿ ಶ್ರೀಯುತ ಬಿ.ಆರ್. ಜೋಯಪ್ಪನವರ 'ಚೆಂಚಿ'ತೇಳುವ ಲಲಿತ ಪ್ರಬಂಧ ಸಂಕಲನ ಹೊರ ಬರ್ತಿರುದು ಕುಸಿನ ಸಂಗತಿ. ಅರೆಬಾಸೆನ ಜೀವನ ಪದ್ಧತಿಲಿ ಸಾಹಿತ್ಯಕ್ಕೆ ಬೇಕಾದಷ್ಟು ಸರಕ್ ಉಟ್ಟು. ಕಾಲ ಓಡಿಕಂಡ್ ಹೋಗ್ತಿದ್ದಂಗೆ ವ್ಯವಸ್ಥೆ ಬದಲಾಗ್ತಾ ಹೋದೆ. ಆಗ ಸಹಜವಾಗಿ ಪಂಡ್‌ನ ಜೀವನ ಕ್ರಮ ಕಳ್ದ್ ಹೋದೆ. ಹಳತ್ ಮತ್ತೆ ಹೊಸತರ ಮುಖಾಮುಖಿಯಾಕನ ಅಥವಾ ಹಳ್ತ್ ಪೂರಾ ಹೋಗಿ ಹೊಸತೊಂದು ಬದಲಾವಣೆ ಬಾಕನ ನೆಂಪು ಹಿಂದೆಗೆ ಜೀಕಿದೆ. ಯಾವುದೋ ಹೊತ್ತ್‌ಲಿ ಹಳತ್ತೆಲ್ಲ ನೆಂಪಿಗೆ ಬಂದ್ ಕುಸಿ ಕೊಟ್ಟದೆ, ಕೆಲವೊಮ್ಮೆ ಸಂಕಟ ಆದೆ. ಯಾವ ಕಾಲ ಒಳ್ಳದ್ ತೇಳುವ ಪ್ರಶ್ನೆ ಸುರಾದೆ. ಇಂತ ಹೊತ್ತುಲಿ ತಮ್ಮ ಚೆಂಚಿಂದ ಅನುಭವದ ರಸ ಮೂಟೆಗಳನ್ನ ಒಂದೊಂದಾಗಿ ತೆಗ್ದ್ ನಮಗೆ ಬಿ.ಆರ್. ಜೋಯಪ್ಪನವು ಉಣ ಬಡಿಸಿಯೊಳ.

ಚೆಂಚಿ ಪ್ರಬಂಧ ಸಂಕಲನ ಹಳ್ತ್ ಹೊಸತರ ನಡುವಿನ ಕೊಂಡಿಯಾಗಿ ಕೆಲ್ಸ ಮಾಡಿದೆ. ಇಲ್ಲಿಯ ಬರಹಗ ಮುದ ಕೊಟ್ಟವೆ. ಲಾಲಿತ್ಯಪೂರ್ಣ ಬಾಸೆ ಇವರ್‌ದ್. ಮೂಲ ಅರೆಬಾಸೆ ಪೊರಿಮಳ ಇಲ್ಲಿ ಸಿಕ್ಕಿದೆ. ಈ ಪ್ರಬಂಧ ಅರೆಬಾಸೆ ಸಾಹಿತ್ಯಕ್ಕೊಂದು ಉತ್ತಮ ಕೊಡುಗೆ ಅಂತ ಅಂದ್‌ಕಂಡವೆ. ಒಳ್ಳೆಯ ಪ್ರಬಂಧಕ್ಕಾಗಿ ಬಿ.ಆರ್. ಜೋಯಪ್ಪನವ್ಕೆ ಅಭಿನಂದನೆಗ.

**– ಲಕ್ಷ್ಮೀನಾರಾಯಣ ಕಜೆಗದ್ದೆ**

# ನನ್ನ ಮಾತ್

ಈಗ ಇದ್ ಹಿರಿಯ ಮತ್ತೆ ಕಿರಿಯರ ನಡುನ ಬದ್ಕ್‌ನ ಸಂಗಮದ ಕಾಲ! ಕಾಲಕ್ಕೆ ತಕ್ಕಂಗೆ ನಾವ್ ನಮ್ಮನ ಒಡ್ಡಿಕಣ್ತಾ ಒಳೊ. ಆದರೆ ಕಾಲಂತೂ ಬದ್ಲಾತ್ಲೆ, ವ್ಯವಸ್ಥೆ ಬದ್ಲಾಗುಟು. ಬದ್ಲಾದ ವ್ಯವಸ್ಥೆಗೆ ಹೊಂದಿಕಂಬೊದು ಅನಿವಾರ್ಯ. ಹಿಂದೆ ನಮ್ಮೆಲ್ಲರ ಬದ್ಕ್ ಈಗನಂಗೆ ಇತ್ಲೆ. ಇಂದ್ ನಲ್ಲಿ ಮುಂದೆ ಕೈ ನೀಂಡಿರೆ ಸಾಕ್ ನೀರ್ ಬಂದವೆ. ಗಾಯನೇ ಆಗದೆ ಸರ್ಜರಿ ಮಾಡಿವೆ. ಬೇನೆನೇ ಇಲ್ಲೆತ್ತೇಳುವ ಕಾಲ ಬಂದುಟು.

ಕೆಲವರ ಅಡ್ಗೆ ಮನೆಲಿ ಒಲೆ ತಿಂಟೆ ಇಲ್ಲೆ, ಬೆಸಗೆ ಇಲ್ಲೆ, ಮಣ್ಣ್‌ನ ಮಡ್ಕೆ, ಚೆಟ್ಟಿ ಇಲ್ಲೆ, ನೆಲು ಇಲ್ಲೆ, ಅಟ್ಟ ಇಲ್ಲೆ, ರಾಟೆ, ಒನಕೆ, ಬೀಸುವ ಕಲ್ಲ್ ಕಾಂಬಕಿಲ್ಲೆ. ಕೃಸಿ ಕೆಲ್ಸ ಬದ್ಲಾಗುಟು. ನೆಂಟ್ರ ಮನೆಗೆ ಹೋದು-ಬಾದು ಕಮ್ಮಿ ಆಗುಟು. ಹೋದರೂ ಹೋದಂದೇ ವಾಪಾಸ್! "ಕತ್ತಲಾಕನ ಬರುವ ಮಳೆ ಬೆಳಗ ಮುಟ್ಟ ಹೊಡ್ದದೆ, ಕತ್ತಲಾಕನ ಬಾವ ನಂಟ ಮಾರ್‍ನೆಗೇ ಹೋದು"ತ್ತೇಳುವ ಮಾತ್ ಅಂದಿತ್ತ್, ಇಂದಿಲ್ಲೆ! ಎಸ್ಟೋ ಮನೆಗಲ್ಲಿ ಮನೆಯವೇ ಪರಸ್ಪರ ಮಾತಾಡಿಕಂಬೊದು ಕಮ್ಮಿ ಆಗ್ತಾ ಉಟ್ಟು. ಕಾಗದ ಬರೆಟ್ಟಂತೂ ಕಾಡ್ ಹತ್ತಿಟು. ಬೆಚ್ಚಂಗೆನ ಹುಲ್ಲು ಮನೆ ನಾಪತ್ತೆ! ಇದ್ ಬದ್ಲಾದ ಇಂದ್‌ನ ವ್ಯವಸ್ಥೆ.

ಅಂದ್ ಮರದ ಕಡ್ಡಿನ ದೂಂಚಿ ಮಾಡಿಕಂಡ್ ಇಂಕ್‌ಗೆ ಮುಳುಂಗ್‌ಸಿ ಬರೆತಿದ್ದೊ. ಮತ್ತೆ ಪೆನ್ನ್ ಬಾತ್. ಅದರೊಟ್ಟಿಗೆ 'ಇಂಕ್ ಪಿಲ್ಸ್' ಬಾತ್. ಪಿಲ್ಸ್‌ನ ನೀರ್‌ಲಿ ಕರ್‌ಗಿಸಿ ಪೆನ್ನ್ ಕೊಟ್ಟಕ್ಕೆ ತುಂಬುಸಿಕಣ್ತಿದ್ದೊ. ಊರೊಳಗೆ ರೇಡಿಯೋ ಎಲ್ಲೋ ಒಂದೆರ್ಡ್ ಮನೆಗಲ್ಲಿ ಇದ್ದರೇ ಜಾಸ್ತಿ. ಅದೋ ಲೈಸನ್ಸ್ ಇದ್ದವು ಮಾತ್ರ ರೇಡಿಯೋ ಇಸಿಕಂಬಕಾಗಿತ್ತ್! ಹಿಂಗೆ ಇಂತ ಸಂಗತಿಗಳ ಕುರ್ತ್ ಬರ್ದದೇ **"ಚೆಂಚಿ"**ತ್ತೇಳುವ ಈ ಪುಸ್ತಕ. ಚೆಂಚಿತ್ತೇಳ್ರೆ ಹಿಂದೆ ಅಜ್ಜಿಕಳ ಸೊಂಟಲಿ ಕೋಸಿಕಂಡ್ ಇರ್ತಿದ್ದ ಬಟ್ಟೆದೊಂದ್ ಸಣ್ಣ ಚೀಲ.

ಮಡಿಕೇರಿ ಆಕಾಶವಾಣಿ, 'ಸ್ನೇಹಕಾವೇರಿ' ಕಾರ್ಯಕ್ರಮಲಿ 'ಜೋಳಿಗೆ'ತ್ತೇಳುವ ಹೆಸ್ರ್‌ಲಿ ಇದರ ಕೆಲ ಸಂಗತಿಗ ಪ್ರಸಾರ ಆಗುಟು. ಅದ್ಕೆ ಈಗ "ಚೆಂಚಿ"ತ್ತೇಳಿ ಈ ಪುಸ್ತಕಕ್ಕೆ ಹೆಸ್ರ್ ಇಸಿಯೊಳೆ. ಪ್ರಸಾರ ಮಾಡ್ದ ಆಕಾಶವಾಣಿಗೆ ಧನ್ಯವಾದಗ.

ಅಂದ್ ನಿಲಯ ನಿರ್ದೇಶಕಿ ಆಗಿದ್ದ ಶ್ರೀಮತಿ ಏಸುಪ್ರಿಯ ಇಂದಿರಾ ಗಜರಾಜ್

'ಜೋಳಿಗೆ' ಬಗ್ಗೆ ತುಂಬ ಕುಸಿಪಟ್ಟ್ 'ಅರೆಬಾಸೆಲಿ ಎಸ್ಟೊಂದ್ ಸಂಪತ್ತ್ ಉಟ್ಟಲ್ಲಾ....'ತ್ತೇಳಿ ನಂಗೇ ಅವು ಧನ್ಯವಾದ ಹೇಳ್ತಿದ್ದೊ. (ಅವು ಇಂದಿಲ್ಲೆ). ಶ್ರೀ ಸುಬ್ರಾಯ ಸಂಪಾಜೆಯವು ಪ್ರಸಾರಕ್ಕೆ ವ್ಯವಸ್ಥೆ ಮಾಡ್ತಿದ್ದೊ. "ಸರ್ ಜೋಳಿಗೆ ತುಂಬಿತಾ"ತ ಶ್ರೀಮತಿ ಕೂಪದಿರ ಶಾರದಾ ನಂಜಪ್ಪನವು ಕೇಳಿ ಕುಸಿಪಡ್ತಿದ್ದೊ. ನಂಗೆ ಸ್ಫೂರ್ತಿ ಕೊಟ್ಟ ಆಕಾಶವಾಣಿನ ಇಡೀ ಬಳಗಕ್ಕೆ ನನ್ನ ಕೃತಜ್ಞತೆಗ.

ಇದೀಗ ತುಂಬ ಗೌರವಂದ ಈ ಪುಸ್ತಕನ ಪ್ರಕಟ ಮಾಡ್ತಿರುವ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್, ಪುಸ್ತಕದ ಆಯ್ಕೆ ಸಮಿತಿ, ಸದಸ್ಯರ್, ರಿಜಿಸ್ಟ್ರಾರ್ ಮತ್ತೆ ಸಿಬ್ಬಂದಿ ವರ್ಗಕ್ಕೆ ಧನ್ಯವಾದಗ.

**'ಚೆಂಚಿ'**ಗೆ ಒಂದೊಳ್ಳೆ ಮುನ್ನುಡಿ ಬರ್ದ್ ಬೆನ್ನ್‌ತಟ್ಟಿ ಕೊಂಡಾಟ ಮಾಡ್ದ ಲೇಕಕರೂ ನನ್ನ ಗುರು ಸ್ಥಾನದ ಹಿರಿಯರೂ ಆದ ಶ್ರೀ ಪಿ.ಜಿ.ಅಂಬೆಕಲ್, ಮಾಜಿ ಮುಖ್ಯ ಶಿಕ್ಷಕರ್, ಚೆಟ್ಟಳ್ಳಿ ಪ್ರೌಢ ಇಸ್ಕೂಲ್ ಇವ್ಕೆ ನನ್ನ ಕೃತಜ್ಞತೆಗ.

ಒಂದ್ ಪುಸ್ತಕನ ಒಂದೆರ್ಡ್ ದಿನಗಳ್ಲಿ ಓದಿ ಕಾಗದ ಬರ್ದ್ ಪ್ರತಿಕ್ರಿಯೆ ಕೊಡುವ ಸಾಹಿತ್ಯ ಪ್ರೇಮಿಯೂ ನನ್ನ ಹಿತೈಸಿಯೂ ಆದ ತೊಂಬತ್ತೆರಡ್ ಪ್ರಾಯದ ನನ್ನ ಮಾವ ಕಾವೇರಿ ಮನೆ ಡಾ। ಬೋಜಪ್ಪನವ್ಕೆ ನಾ ಕೃತಜ್ಞನಾಗೊಳೆ. ನನ್ನ ಸಾಹಿತ್ಯನ ಯಾಗೊಳು ಪ್ರೋತ್ಸಾಹಿಸುವ ನನ್ನ ಹೆಣ್ಣ್ ಶ್ರೀಮತಿ ಭಾರತಿ, ಮಕ್ಕಳಾದ ಶ್ರೀಮತಿ ದಿವ್ಯ, ಡಾ.ದೀಪಕ್, ಅಳಿಯ ಬಳ್ಳಡ್ಕ ಶ್ರೀ ಜಯಪ್ರಕಾಶ್, ಸೊಸೆ ಶ್ರೀಮತಿ ಜಯಶ್ರೀ, ಪಿಳ್ಳೆಕ ಕು.ಇಂಪನ, ಕು.ಶೃಂಗ, ಮಾ. ಆರ್ಯ ಬಾರಿಯಂಡ ಇವ್ಕೆ ಮತ್ತೆ ಅಕ್ಕ ಶ್ರೀಮತಿ ಗೋಪಮ್ಮ, ಭಾವ ಪ್ರೊ.ಗೋವಿಂದಯ್ಯ, ಸೋದರ ಸೊಸೆ ಡಾ.ಚರಿತ, ಸೋದರ ಅಳಿಯ ಚಿರಂತನ ಇವ್ಕೆಲ್ಲಾ ನಾ ಋಣಿ ಆಗೊಳೆ.

ಪೊರ್ಲಾಗಿ ಮುದ್ರಣ ಮಾಡ್ದ ಶ್ರೀ ಕೃಷ್ಣ ಪ್ರೆಸ್‌ನ ಮಾಲೀಕರ್ ಮತ್ತೆ ಸಿಬ್ಬಂದಿ ವರ್ಗಕ್ಕೆ ವಂದನೆಗ. ನನ್ನೆಲ್ಲಾ ಅಭಿಮಾನಿ ಬಳಗಕ್ಕೆ ಮತ್ತೆ ನನ್ನ **ಚೆಂಚಿ**ನ ಕುಸೀಂದ ಕೈಗೆ ತಕಂಡ್ ಓದಿಕೆ ಕುದ್ದ ನಿಮಿಗೆ ನನ್ನ ಕೃತಜ್ಞತೆಗ.

ಮೊ: 9481770584 – **ಬಾರಿಯಂಡ ಆರ್. ಜೋಯಪ್ಪ**

# ಒಳಪುಟಲಿ

# ಹಳ್ಳಿ ಮನೆ

ಹಳ್ಳಿ ಮನೇತೇಳಿರೆ ಹಿಂದೆಲ್ಲಾ ಒಂದ್ ಕೊತ್ತಿ, ಚೈಗೂಡಿಕೆ ಒಂದೆರ್ಡ್ ನಾಯಿಗ, ಕೊಟಗೂಡಿಕೆ ನಾಕ್ ಕೋಳಿಗ, ಸೂರ್ ಕೆಳಗೆ ಪಳ್ಳ ಬೀಳಿಕೆ ಒಂದೋ ಎರಡೋ ಹಂದಿಗ, ನಾಕ್ ನಡೆ ದನಗ ಇರ್ತಿದ್ದೊ. ಡಜನ್‌ಗೆ ನಾಕ್ ಕಮ್ಮಿಂತೇಳುವಷ್ಟ್ ಮಕ್ಕಳೂ ಇರ್ತಿದ್ದೊ. ಮನೆದ್ ಗೋಡೆ ಮಣ್ಣ್‌ದೋ ನೆರಿಕೆದೋ. ತಾಕತ್ತಿದ್ದರೆ ಹಂಚಿದ್ ಮಾಡ್, ಇಲ್ಲರೆ ಹುಲ್ಲ್‌ದ್ ಹೊದಿಕೆ ಇರುವ ಮನೆ. ಅಂಗಳ ಸುತ್ತ ಕಕ್ಕಟ್ಟ್. ಅದ್ ಇದ್ದೇ ಇರೊಕುತೇನಿಲ್ಲೆ. ಅಂಗಳದ ಕರೇಲಿ ಗುಲಾಬಿ, ಮಲ್ಲಿಗೆ, ಗೋರಟೆ, ಡೇಲಿಯ ಹೂನ ಗಿಡಗ. ಓ ಅಲ್ಲಿ ಸೌದೆ ಕೊಟಗೆ. ಅದ್ರೊಟ್ಟಿಗೆ ಕೋಳಿ ಗೂಡು. ಆಚೆ ಹಂಞ ದೂರಲಿ ದನಗಳ ಕೊಟಗೆ. ಹಂದಿಗೆ ಗೂಡು ಇದ್ದರಾತ್ ಇಲ್ಲರೂ ಆದು. ದಬ ದಬ ದಬತ ಟಿಣ್ಣ್ ಬಡ್ದರೆ ಸಾಕ್ ತೆಳಿ ಕುಡೆಕೆ ಹಂದಿಗ ಎಲ್ಲಿದ್ದರೂ ಗುರುಗುಟಿಕಂಡ್, ಓಡಿಕಂಡ್ ಬಾತಿದ್ದೊ. ಮಕ್ಕಳಿಗೆ ಆಸೆ ಆಕನ ಬೇರೆಯವ್ರ ರಂದುದು ಬೇಡಲ್ಲತ ಮನೆ ಹಕ್ಕಲೆ ನಾಕ್ ಬುಡ ಕೆಸ, ಹುತ್ರಿಗೆಣ್ಸ್, ಮರ ಗೆಣ್‌ಸ್, ಬೆಲ್ಲದ ಗೆಣ್ಸ್, ಕೂವೆಗೆಂಡೆ, ಒಂದ್ ಹತ್ತ್ ಬಾಳೆ ಬುಡ ನಟ್ಟುಕಂಬತ್ತಿದ್ದೊ. ತಲೆಗೆತ್ತಿರೆ ಕಾಲಿಗೆತ್ತುದುಲೆ ಕಾಲಿಗೆತ್ತಿರೆ ತಲೆಗೆತ್ತುದುಲೆತೇಳುವಂಗಿರುವ ಬದ್ಕ್. ಮೂರು ಹೊತ್ತ್ ಅಲ್ಲರೂ ಎರಡ್ ಹೊತ್ತ್‌ನ ಊಟಕ್ಕೆ ತಕ್ಕ ಬತ್ತ ಕಟ್ಟುವ ಹಳ್ಳಿಯವು. ಮನೆಲಿ ಇಂವಂದ್ ಅವಂಗೆ, ಅವಂದ್ ಇವಂಗೆ, ಇವುಳ್ದ್ ಅವುಳಿಗೆ ಅಂತೂ ಚೆಲ್ ಚೆಲ್ ಬಟ್ಟೆ ಮೈ ಮೇಲೆ ಇರ್ತಿತ್ತ್. ಹಿಂಗಿದ್ದರೂ 'ಅಯ್ಯೋ ಬದ್ಕ್ ನರಕ'ಂತ ಹೇಳ್ದವ್ ಅಲ್ಲ.

ದಾರಿಲಿ ಮನಿ ಯಾರಾರ್ ಕಾಂಬಕೆ ಸಿಕ್ಕಿ "ದೂರ ಹೋಗಿದ್ದರಿ"ತ ಕೇಳ್ರೆ ಅಂಗ್ಡಿಗೆ ಹೋಗಿದ್ದೆಂತೊ, ಇಲ್ಲರೆ ಸಂತೆಗೆ ಹೋಗಿದ್ದೆಂತೋ ಹೇಳ್ತಿದ್ದದ್‌ಲ್ಲದೆ

ಆಸ್ಪತ್ರೆಗೆ ಹೋದ್ದ್‌ತ ಹೇಳ್ತಿದ್ದವು ಕಮ್ಮಿತೇ ಹೇಳಕ್. ಆಗನವುಕೆ ದೊಡ್ಡ ಕಾಯ್ಲಂತ ಬಂದದ್ ಗೊತ್ತೇ ಇಲ್ಲೆತ ಹೇಳ್‌ವಷ್ಟ್ ಆರೋಗ್ಯವಂತರ್. ಆಸ್ಪತ್ರೆಲಿ ಎಲ್ಲ್ಯಾರ್ ಹೊಟ್ಟೆ ಕೊಯ್ದುವೆಗಡತ ಸುದ್ದಿ ಬಾತೋ... ಆತ್ ಅಂವ 'ಹೋತು'ತೇ ಲೆಕ್ಕ! ಆಗೆಲ್ಲಾ ಬಂದರೆ ಒಂದೋ ಸಳಿಜರ, ಇಲ್ಲರೆ ಸೀತ ಕೆಮ್ಮುಲು. ಸಳಿ ಜರ ಬಂದರೆ ಚಿಟ್ಟಿ ಕೊಡಿ ತಾದು. ಚಿಟ್ಟಿಕೊಡಿತೇಳಿರೆ ಗೆಜ್ಜಗನ ಕೊಡಿ ಉಟ್ಟಲೆ ಅದ್. ಅದರ ಸುಳಿನ ವಾಮದಕ್ಕಿ, ಒಳ್ಳಮೆಣ್ಸ್, ಬೆಳ್ಳುಳ್ಳಿ ಸೇರ್ಸಿ ಅರ್ಧ್ ಅರ್ಧ ಮುಕ್ಕಾಲ್ ಗಲಾಸಸ್ಟ್ ಮಾಡ್ದು, ಹಿಟ್ಟ್‌ನ ಸೆಟ್ಟ್‌ಗನ ಕೆಂಪು ಕಾಸುದು, ಮದ್ದ್‌ಗೆ ಜೊರ್‌ತ ಮುಳುಗುಸುದು. ದೊಡ್ಡವ್ ಗಟಗಟಾಂತ ಕುಡೇತಿದ್ದೊ. ಮಕ್ಕಳಿಗಾದರೆ ಬಾಯಿಗೆ ಸೆಡೆಕಾವ್ ಹಾಕಿ ಬಾಯಿ ಬುಡ್ಸಿ ಹೊಯ್ಯೊತಿದ್ದೊ. ಗುಡಿ ಹೊದ್ದ್ ಮಲ್‌ಗ್‌ಸ್ತಿದ್ದೊ. ತಕಣಿ ಬೆಗ್‌ರಿ ಬೆಗ್‌ರಿ ಮೈ ಪೂರ ಚೆಂಡಿ ಚೆಂಡಿ. ಹಾಸಿಗೆ ಬುಟ್ಟ್ ಎದ್ದಾಕನ ಸಳಿನೂ ಇಲ್ಲೆ, ಜರನೂ ಇಲ್ಲೆ. ಹೊಟ್ಟೆ ಬೇನೆ ಬಾತೊ ಬ್ಯಾಂಗೆ ಮರದ ಕೆತ್ತೆನ ತಂದ್ ಗುದ್ದಿ ನೀರಿಗೆ ಹಾಕಿ ಅದರ ಕೆಂಪು ರಸನ ತಕಂಡ್ ಅಕ್ಕಿ ಹೊಡಿ ಹಾಕಿ ಒಂದ್ ಚೂರ್ ಬೆಲ್ಲ ಸೇರ್ಸಿ ತೊಳ್ಸ್‌ನ ಹಿಟ್ಟ್ ಮಾಡಿ ತಿಂದರೆ ಹೊಟ್ಟೆ ಬೇನೆ ಟಪ್ಪತ ನಿಲ್ಲ್‌ತಿತ್. ಅದ್ ಇಲ್ಲರೆ ಗಾಳಿ ಸೊಪ್ಪು ರಸನ ಕುಡ್ಸ್‌ತಿದ್ದೊ. ಎದ್ರ್ ಮುಟ್ಟಿ ಮನಿ ಮೈಮೇಲೆ ದಡಾರ ಬಂದರೆ ದೊಡ್ಡಪತ್ರೆ ರಸನ ಕುಡ್ಸುದು, ಮೈಗೆ ಪೂಜುದು ಮಾಡ್ತಿದ್ದೊ. ಎದ್ರ್ ಮುಟ್ಟುದುತೇಳಿರೆ ಎಂತಾರ್ ಸೋಂಕಿಕಂಬದುತ. ಮಕ್ಕ ನಿದ್ದೆಲಿ ಹದ್ಕಿ ಹದ್ಕಿ ಬೀಳ್ದು, ಹೆದ್ರಿಕಂಡಂಗೆ ಆಡ್ದು ಕಂಡರೆ ಮನೆ ಎದ್ರ ಮೆಟ್ಟ್ ಕಲ್ಲ್‌ಲಿ ಕೂರ್ಸಿ ಕುರ್ದಿ ನೀರ್ ಮಾಡಿ ನೆಣೆ ಹೋಸಿ ಮೊಕದ ಮುಂದೆ ನೆಣೆನ ಹಿಡ್ದ್ 'ಕುರ್ದಿ' ನೀರ್‌ನ ರಪ್ಪ್‌ಂತ ಮೊಕಕ್ಕೆ ಹಾಕ್‌ತಿದ್ದೊ. ಮೊಕಕ್ಕೆ ನೀರ್ ಬೀಳ್ಕನ ಕೂಸು ಒಮ್ಮೆಗೆ ಹದ್ಕಿದೆ.

ದೊಂಡೆ ಬೇನೆಗೆ ಹುಳಿನೀರ್ ಸುಣ್ಣ ಹಾಕ್‌ತಿದ್ದೊ. ದೊಂಡೆಲಿ 'ಮೊಳೆ' ಎದ್ದರೆ ಉಪ್ಪು ಕಲ್ಲ್ ಇಸಿ ಒಟ್ಟ್‌ಸ್‌ತ್ತಿದ್ದೊ. ಕೆಮ್ಮುಲು ಕಮ್ಮಿ ಆಗದೆ ಕಫ ಇದ್ದರೆ ಕಾವಟೆ ಮರ ಉಟ್ಟು ನೋಡಿ, ಅದರ ಮುಳ್ಳುನ ತಾತಿದ್ದೊ. ಕಾವಟೆ ಮರತೇಳಿರೆ ಬೂರುಗದ ಮರ ಉಟ್ಟಲ್ಲ ಹಂಗೆ ಇರುವ ಮರ. ಆ ಮರದ ಮುಳ್ಳು ತುಂಬಾ ಒಳ್ಳ ಮದ್ದ್. ತುಂಡು ಮುಳ್ಳು, ಬುಡ ಮಾತ್ರ ಅಗಾಲ ಇದ್ದದೆ. ಅದರ ತಂದ್ ನಿಂಬುಳಿ ನೀರೊಟ್ಟಿಗೆ ಸವೆಕು. ಗಂಧದಂಗೆ ಸಿಕ್ಕುವ ರಸನ ಕೋಳಿಗರಿಗೆ ಹಾಕಂಡ್ ದೊಂಡೆ ತೊಳ್ದರೆ ಕಫನ ಕಕ್ಕುವೆ. ಹಿಂಗೆ ಇಂತದೇ ಮನೆ ಮದ್ದ್ ಅಂದ್‌ನವರ್ದ್. ಇದ್ ಹತ್ತ್ ನಲ್ವತ್ತ್ ವರ್ಷದ ಹಿಂದೆದ್ ಸ್ಥಿತಿನ ನಾ ಹೇಳ್ತಾ ಇರ್ದು. ಇಂದ್‌ದ್

ಬುಡಿ, ಇದರ ತಿಂದರೆ ಶೀತ, ಅದರ ತಿಂದರೆ ಉಷ್ಣ, ಮತ್ತೊಂದ್ ತಿಂದರೆ ಉರಿ ಶೀತ, ವಾಯಿ, ಪಿತ್ತ, ಶುಗರ್, ಬಿ.ಪಿ ಹಂಗೂ ಹಿಂಗೂ ಅಂವ ಪಡ್ಚಂತೇಳ್ವ ಸ್ಥಿತಿ.

ಈಗಂತೂ ಸುಲಾಬ ಹೆರಿಗೆ ಇಲ್ಲೆಲೆಂತೇಳಿವೆ. ಕೂಸುನ ತೆಗೆಕೊರೆ ಆಪರೇಷನ್ನೆ ಮಾಡೊಕು! ಇನ್ನ್ ಹಲ್ಲ್‌ದ್ ಕತೆ ಕೇಳಿ. ಹಲ್ಲ್‌ಗ ಪೂರಾ ಹುಳ್ಕು. ಜಾಡೆ ಹಲ್ಲ್‌ಗಳಿಗೆ ತೊಪ್ಪಿ ಕೂರ್ರೊಕು. ಹಿಂದೆಲ್ಲಾ ಉಮ್ಮಿ ಕರಿನೂ ಉಪ್ಪುನೂ ಕೂಡ್ಸಿಕಂಡ್ ಹಲ್ಲ್ ಉಜ್ಜುತಿದ್ದೊ. ಎಷ್ಟೋ ಮನೆಗಳ್‌ಲಿ ಉಮ್ಮಿಕರಿ ಮತ್ತೆ ಉಪ್ಪುನ ಹೊಡಿ ಮಾಡಿ ಡಬ್ಬಿಲಿ ತುಂಬುಸಿಕಣ್‌ತಿದ್ದೊ. ಹಂಗೆ ಹಲ್ಲ್ ಉಜ್ಜುತ್ತಿದ್ದ ಅಂದ್‌ನವು ಅರುವತ್ತು ದಾಟಿರೂ ಚಕ್ಕುಲಿನ ಕರುಂ ಕುರುಂತ ತಿಂಬತ್ತಿದ್ದೊ. ಎಳ್ಳ್ ಉಂಡೆನೂ ಕಟುಂ ಕುಟುಂತ ಅಗೆತಿದ್ದೊ. ಆ ವಯಸ್‌ಲೂ ಸೂಜಿಗೆ ನೂಲು ಹಾಕಂಬವು ಬೇಕಾ? ಬಟ್ಟೆಗೆ ಅಡೆ ಹಾಕಂಬವು ಬೇಕಾ? ಬುಡಿ, ಆಗಂತೇಳ್ರೆ ಅವರ ಆಹಾರ ಪದ್ಧತಿ ಹಂಗೇ ಇತ್ತ್.

ಹಿಂದೆಲ್ಲಾ ಮಳೆಗಾಲಲಿ ಕೂಗಲೆ ಎಲೆಂದ ಬೆತ್ತನೋ, ಬಿದ್‌ರ್‌ನೋ ಹೆಣ್ಕ್‌ದ ಮಾಡ್ತಿದ್ದ ಗೊರ್ಗ ಇತ್ತ್. ಗದ್ದೆಗೂ ಅದೆ, ಸಂತೆಗೂ ಅದೆ. ಇಸ್ಕೂಲಿಗೂ ಅದೇ. ಕೆಲವು ಮಾತ್ರ ಕೊಡೆ ಹಿಡೆತಿದ್ದೊ. ಆ ಕೊಡೆ ಹೆಂಗಿರ್‌ತಿತ್ತ್? ಬೆತ್ತದ ದಂಡ್‌ನ ಕೊಕ್ಕೆ ಕೊಡೆ. ಆ ಕೊಡೆಂದ ಸುಮಾರ್ ಉಪಕಾರ ಆತಿತ್ತ್. ಕುತ್ತಿಕಂಡ್ ನಡೆಕೂ, ಕೊಂಬೆ ಬಗ್ಗ್‌ಸಿ ಹಣ್ಣ್ ಕೊಯ್ಯಕೂ ದಾರಿಲೇನಾರ್ ಅಳುಂಬು ಸಿಕ್ಕಿರೆ ತುಂಬ್‌ಸಿಕಂಬಕೂ ತೋಡು ದಾಟಕನ ಸಿಕ್ಕುವ ಕಕ್ಕಡೆ ಎಸಂಡ್‌ನ ಹಾಕಂಬಕೂ ನಾಯಿಗಳ ಬೆರ್ಸಿಕೂ, ತಲೆಹರಟೆ ಮಾಡವ್ಕೆ ಹೆದ್ರಿಸಿಕೂ ಆತಿತ್.

ಅಂದ್‌ನ ಹೆಣ್ಮಕ್ಕ ನೀರ್ ಹೊರ್ತಿದ್ದ ಪೊರ್ಲು ನೋಡೊಕು. ತಲೆ ಮೇಲೆ ಸಿಂಪೆ ಇಸಿ ಅದರ ಮೇಲೊಂದು ಬಿಂದಿಗೆ, ಎಡ್ಡ ಸೊಂಟಲಿ ಇನ್ನೊಂದ್ ಬಿಂದಿಗೆ, ಬಲ್ದ ಕೈಲಿ ಮತ್ತೊಂದು ಬಿಂದಿಗೆ. ಒಮ್ಮೆಗೆ ಮೂರು ಬಿಂದಿಗೆ ನೀರ್ ಹೊರ್ತಿತ್. ಹಿಂಗೆ ಹೊತ್ತ್‌ಕಂಡ್ ಬಾಕನ ಹಿಂದೆಂದ 'ಅವ್ವಾ ನನ್ನ ತೆತ್ತಿಕಾ'ತ ಮರ್ಟ್‌ಕಂಡ್ ಬಾತಿದ್ದ ಕೂಸು ಬೇರೆ. ನೀವ್ ಹಂಗೆ ನೀರ್ ಹೊತ್ತವಾ? ಇಲ್ಲರೆ ಅವ್ವನ ಹಿಂದೆ ಮರ್ಟ್‌ಕಂಡ್ ಕುಣು ಕುಣುತ ನಡ್ದವಾ? ಅಂದ್‌ನ ಆ ದಿನಗ ಇನ್ನ್ ಮುಂದೆ ಬಾದೊ?

* * * * *

# ಕೈಕಂಬ

ಚಿದಂಗ ಇಕ್ಕಿಕಾಗದ್, ಕಡ್ಪ ದಾಟಿಕಾಗದ್. ಇದ್ ಹಿರಿಯವ್ ಮಾಡ್ದ ಕಟ್ಟ್‌ಪಾಡ್. ಚಿದಂಗ ಇಕ್ಕುದುತೇಳಿರೆ ಬಲ್ದ ಕೈಂದ ಬಲ್ದ ಕಡೆಗೆ ಸೆಡೆನ ಮೊಗ್ಚುದು. ಇಲ್ಲರೆ ಎಡ್ದ ಕೈಂದ ಎಡ್ದ ಕಡೆಗೆ ಮೊಗ್ಚುದು. ಹಂಗೆ ಇಕ್ಕುದು ಸರಿಯಲ್ಲತೇಳಿವೆ. ಸತ್ತವುಕೆ ಎಡೆ ಇಕ್ಕುದು ಹಂಗೆ. ಮಜ್ಜಿಗೆ ಹುಳಿ ಇದ್ದರೆ ಕಡ್ಪ ಮಜ್ಜಿಗೆಂತೇಳ್ವೆ. ಒರಟಾಗಿ ಮಾತಾಡಿರೆ ಕಡ್ಪ ಮಾತ್‌ಂತೇಳ್ವೆ. ಇನ್ನ್ ಕಡ್ಪ ದಾಟುದುತೇಳಿರೆ ಅಡ್ಡ ದಾಟುದುತ ಅರ್ತ. ಕೂಸು ಮಲ್ಗಿರಕನ ಅದರ ಕಡ್ಪ ದಾಟಿಕಾಗದ್. ಕೂಸುನ ಬಹು ವಚನಲಿ ಕರೆಕು. ತೊಟಿಗಿಲ್‌ನ ಮೆಟ್ಟಿಕಾಗದ್ತ್ತೇಳುವ ಕಟ್ಟ್‌ಪಾಡ್ ಉಟ್ಟು.

ಕಾಗದ ಮತ್ತೆ ಪುಸ್ತಕನ ಮೆಟ್ಟುದಾಗಲಿ, ಹರೆದಾಗಲಿ, ನೆಲಲಿ ಇಸುದಾಗಲಿ ಬತ್ತ್. ಅದ್ ಸರಸ್ವತಿ. ಹಂಗೆ ಮಾಡಿರೆ ವಿದ್ಯೆ ಹತ್ತುದುಲೆ. ಸೂರ್ಯ ಕಂತಿಕೆ ಮುಂದೆ ಮನೆ ಗುಡ್ಸಿ ಸಗ್‌ಣಿ ನೀರ್ ತಕ್ಕ್‌ಳ್ಲೊಕು. ಸೂರ್ಯ ಕಂತಿದ ಮೇಲೆ ಮನೆ ಗುಡ್ಸುದಾಗಲಿ, ತಲೆ ಬಾಚುದಾಗಲಿ ಮಾಡಿಕೆ ಬತ್ತ್. ಕತ್ತಲೆ ಆದ ಮೇಲೆ ಮನೆ ಗುಡ್ಸಿ, ಕಸ ಹೊರಗೆ ಹಾಕಿರೆ ಏನಾರ್ ಬೆಲೆ ಬಾಳುವ ವಸ್ತುಮನಿ ಹೊರಗೆ ಹೋಬುಡುದು. ತಲೆ ಬಾಚ್‌ಕನ ಕುದೊಲು ಬಿದ್ದರೆ ಕಾಂಬಲೆ. ಮನೆ ಒಳಗೆ ಉಗುರು ತೆಗೆಕೆ ಬತ್ತ್. ಅದರ್‍ಲ್ಲೂ ಇರ್ಲ್ ಉಗುರು ತೆಗೆಕೆ ಬೊತ್ತೇ ಬೊತ್ತು. ಸೂರು ಕೆಳಗೆ ಉಗುರುನ ಬಿಸಾಡಿರೆ ಮನೆಗೆ ಮಾಟ ಮಾಡ್ದಂಗೆ ಗಡ. ಕುದೊಲುನ ಉಂಡೆ ಮಾಡಿ ಆ ಉಂಡೆಗೆ ಉಗ್ದ್ ಬಿಸಾಕೊಕು. ಹಂಗೆ ಬಿಸಾಡದಿದ್ದರೆ ಗೋಡೆ ಕೊರ್ದದಲ್ಲ, ಅದೊಂದ್ ಬೂದು ಬಣ್ಣದ ದುಂಬಿ ಅದ್ ಆ ಕುದೊಲುನ ಬೂದಿಗೆ ಮೇಕಿ ಬೆಳ್ಳಂಗೆ ಮಾಡಿ ತಕ್ಕಂಡೋಗಿ ಯಮಂಗೆ ತೋರ್‍ಸಿದೆಗಡ. ಆಗ

ಯಮ ಕೂಡ್ಲೆ ದೂತರ್‌ನ ಕಳ್ಸಿ ಬೆಳ್ಳಂಗೆ ಕುದೊಲವ್ ಯಾರ್‌ತ ನೋಡಿ ಅಂತವರ ಜೀವನ ಎಳ್ಕಂಡ್ ಬಾಕೆ ಹೇಳ್ದೆಗಡ. ಅದ್ಕೆ ಕುದೊಲುನ ಉಂಡೆ ಮಾಡಿ ಬಿಸಾಡಕನ ಅದ್ಕೆ ಉಗ್ದರೆ ಅದ್ ಅಸುದ್ದತೇಳಿ ದುಂಬಿ ಮುಟ್ಟುದುಲೆತ ಹಿರಿಯವು ಕತೆ ಹೇಳಿವೆ. ಬಾಳೆ ಎಲೆ ಬಗ್ಗೆ ಪವಿತ್ರ ಭಾವನೆ ಉಟ್ಟು. ಬಾಳೆಲೆನ ಕೊಯ್ದ್ ತಾಕನ ಒಂಟಿ ಎಲೆನ ತಾಕೆ ಬತ್ತ್. ಅದರೊಟ್ಟಿಗೆ ಒಂದ್ ಕೀಂತಾರ್ ಬೇಕ್. ಅಷ್ಟೇ ಅಲ್ಲ ಬಾಳೆಲೆನ ಕೊಯ್ಯಕನಾಗಲಿ, ಅದರ್‌ಲಿ ಉಂಬಕನಾಗಲಿ ಹರ್‍ಕಂಬಕಾಗದ್. ಹಂಗೆ ಹರ್‍ಕಂಡರೆ ಅಂತವುಕೆ ಸೂಕ್ಷ್ಮತೆ ಇಲ್ಲೆ, ಅವು ಸಾಲಗಾರರ್ ಆದವೆಗಡ. ಕೆಲ್ಸ ಮಾಡಕನ ಹೆಣ್ಮಕ್ಕ ಬಳೆನ ಒಡ್ಕಂಬಕಾಗದ್. ಹಂಗೆ ಒಡ್ಕಂಡ್ರೆ ಅವ್ಕೂ ಸೂಕ್ಷ್ಮತೆ ಇಲ್ಲೆ, ಸಂಸಾರನ ನಡ್ಸುದೆ ಕಷ್ಟ ಆಬುಟದೆತ ಹೇಳಿವೆ. ಒಟ್ರಾಸ್ ಏನ್‌ಂತೇಳಿರೆ ಬದ್ಕ್‌ಲಿ ಸೂಕ್ಷ್ಮತೆ ಇರ್‌ಲಿತ ಹಿರಿಯವ್ ಮಾಡ್ದ ಕಟ್ಟ್‌ಪಾಡ್.

ಊಟ ಇಕ್ಕಕನ ಪಾತ್ರೆನ ಕರಕರಾಂತ ಕೆರೆಕಾಗದ್. ಉಂಬಕನ ಬಟ್ಲಿಗೆ ಕೈನ ಕುಟ್ಟಿಕಾಗದ್. ಕೈ ತೊಳ್ದ್ ಸಿಡ್ಕಿಕಾಗದ್. ಉಂಡ್‌ಕಂಡಿರಕನ ಇನ್ನೊಬ್ಬ ಉಂಡ್ ಎದ್ದಂವ ಕೈ ತೊಳ್ದ್ ಬಾಯಿ ಮುಕ್ಕುಳ್ಸಿ ಕಾಂಕ್ರಿಸಿ ಉಗೆಕಾಗದ್. ಉಂಡ್‌ಕಂಡಿರುವುಕೆ ಹೇಸಿಗೆ ಆದೆ. ಮತ್ತೆ ಇನ್ನೊಬ್ಬಂಗೆ ಕೇಳುವಂಗೆ ತೇಗುದು ತಪ್ಪು. ದೊಡ್ಡವು ಇರುವಲ್ಲಿ ಸಣ್ಣವು ದಪ್ಪ ದೊಂಡೆಲಿ ಮಾತಾಡ್ದು ತಪ್ಪುತ ಹಿರಿಯವು ಹೇಳಿವೆ.

ಒಲೆ ತಿಂಟೆ, ಕಡೆವ ಕಲ್ಲ್, ಬೀಸುವ ಕಲ್ಲ್, ನರ್‍ಗ್ಗಳಿ ಇದರ್‍ನೆಲ್ಲಾ ಮೆಟ್ಟಿಕಾಗದ್. ಯಾಕೆತೇಳಿರೆ ಇದೆಲ್ಲಾ ಅವ್ವನ ಎದೆಗೆ ಸಮತ್ತೇಳುವ ಗೌರವ. ಆಕಸ್ಮಾತ್ ಮೆಟ್ಟಿ ಹೋದರೆ ಅದ್ಕೆ ಸಾಮಿ ಮಾಡ್ಕಂಬಕು. ಬತ್ತ ಕುಟ್ಟುವ ಕೊಟ್ಟಿಗೆಲ್ಲಾಗಲಿ, ಹಟ್ಟಿಲಾಗಲಿ, ಕಳಲ್ಲಾಗಲಿ ಯಾರೂ ಪಾದರಕ್ಷೆ ಹಾಕುವಂಗಿಲ್ಲೆ.

ದನಕ್ಕೆ ಒದೆದಾಗಲಿ, ದನದ ಹಗ್ಗನ ಕಡ್ಪ ದಾಟುವುದಾಗಲಿ, ನೇಗ್ಲ್, ನೊಗ, ಕೊಟ್ಟು, ಕೊಡ್ಲಿ, ಮಚ್ಚಿ, ಬಾಚಿ, ಕತ್ತಿ ಇದಾವುದರ್‍ನೂ ಕಡ್ಪ ದಾಟುದು, ಮೆಟ್ಟುದು ಮಾಡುಲೆ. ಅವೆಲ್ಲ ನಾವಿಗೆ ಪವಿತ್ರ ವಸ್ತುಗ. ನಾಟಿ ನಡ್ಕನ, ಬೆಳೆ ಕೊಯ್ಯಕನ, ಒಕ್ಲು ಕೆಲ್ಸ ಮಾಡಕನ ಯಾರೂ ಕೆಟ್ಟ ಮಾತ್ ಆಡ್ದುಲೆ. ಕಿಚ್ಚ್ ಕೊಳ್ಳಿನ ಮೆಟ್ಟಿಕಾಗದ್. ಹಂಗೆ ಮೆಟ್ಟಿರೆ ನೀರ್‌ಲಿ ಕೊಚ್ಚಿ ಹೋದವೆಗಡ. ಪಾದನ ಕಿಚ್ಚ್‌ಗೆ ತೋರ್‍ಸಿಕಾಗದ್, ಕಿಚ್ಚ್‌ಗೆ ಉಗೆಕಾಗದ್. ಹಂಗೆ ಮಾಡಿರೆ ಬಾಯಿಲಿ ಕಜ್ಜಿ ಬಂದದೆಗಡ. ಏನೇ

ಇರ್‌ಲಿ, ಕಿಚ್ಚ್ ಕೆಟ್ಟದರ ಸುಟ್ಟ್ ಹಾಕುವ ಪವಿತ್ರ ಪಂಚಭೂತಗಳ್‌ಲಿ ಒಂದ್. ಆಹಾರನ ಬೇಸುದು ಅದೇ, ಸತ್ತ ಮೇಲೆ ಹೆಣನ ಸುಡುದೂ ಅದೇ.

ಹಾಲ್, ಮಜ್ಜಿಗೆ, ಮೊಟ್ಟೆ, ಕಣಿಲೆ ಇದರ್ನೆಲ್ಲ ಬಾನಕ್ಕೆ ತೋರ್ಸಿಕಾಗದ್. ಹಾಲ್‌ನೂ ಮಜ್ಜಿಗೆನೂ ಒಟ್ಟಿಗೆ ಕೊಡ್ದುಲೆ. ಮಧ್ಯಾಹ್ನ ಕಳ್ದಮೇಲೆ ಮಜ್ಜಿಗೆನ ಹೊರಗೆ ತಕ್ಕಂಡೋಕೆ ಕೊಡ್ದುಲೆ.

ಕಾಪುಂದ ಕೋಳಿ ಪಿಳ್ಳೆಗಳ ಇಳ್ಸಕನ ಮೊರದೊಳಗೆ ಅರಶಿನ ಕೊಂಬು, ಮಸಿ ತುಂಡು, ಚಾಕ್, ಇಲ್ಲರೆ ಕತ್ತಿ ಅಥವಾ ಆಣಿನ ಇಸಿದ್ದವೆ. ಮತ್ತೆ ಕಾಪುಂದ ಒಂದೊಂದೇ ಹೂ ಪಿಳ್ಳೆಗಳ ತೆಗ್ದ್ ತೆಗ್ದ್ ಮೊರಲಿ ಕೂರ್ಸಿ ಮೆಲ್ಲ ನೆಲಲಿ ಮೊರನ ಮಡ್ಗುವೆ. ಮತ್ತೆ ನುಚ್ಚಿ ಹಾಕಿ ಬರ್ಜಿಲಿ ಮುಚ್ಚಿವೆ. ಹಿಂದೆಲ್ಲಾ ಊರೊಳಗೆ ಕೋಳಿಗ ಎಷ್ಟ್ ಬೇಕಿತ್ತ್? ಈಗೀಗಂತೂ ಊರೊಳಗೆ ಕೋಳಿ ಕೂಂಗುದು ಕೇಳ್ದು ಅಪ್ರೂಪ ಆವುಟು.

ಮನೆ ಮುಂದೆ ಮಾಯ್ರು, ಕೊಟ್ಟು, ಕಾಲಿ ಬಿಂದಿಗೆ ಇಸಿಕಾಗದ್. ಸಾಯಂಕಾಲ ಆರ್ ಗಂಟೆ ಆದ ಮೇಲೆ ದುಡ್ಡು ಕೊಡ್ಕಾಗದ್‌ಗಡ. ಆ ಹೊತ್ತ್‌ಗೆ ಲಕ್ಷ್ಮಿ ಮನೆ ಒಳಗೆ ಬಾದು. ಆಗ ದುಡ್ಡು ಕೊಟ್ಟರೆ ಲಕ್ಷ್ಮಿನ ಹೊರಗೆ ಕಳ್ಸಿದಂಗೆ ಆದೆಗಡ. ಆದರೆ ನಗರಲಿ ವ್ಯಾಪಾರ ಸುರಾದೇ ಕತ್ತಲಾದ ಮೇಲೆ! ನಲ್ಲಿ ಮುಂದೆ ಸಾಲ್‌ಗಟ್ಟಿ ಕಾಲಿ ಬಿಂದಿಗೆ ಇರುದರ ನಾವ್ ನೋಡಿವೆ. ಅದ್ಕೆ ಹೊತ್ತು ಗೊತ್ತು ಒಂದೂ ಇಲ್ಲೆ.

ಒಲೆ ಮೇಲೆ ಖಾಲಿ ಪಾತ್ರನ ಇಸಿಕಾಗದ್, ಕಾಲಿ ಕಾವುಲಿನ ಒಲೆಂದ ಇಳ್ಸಿಕಾಗದ್‌ಂತೇಳಿವೆ. ಹಾಲ್ ಉಕ್ಕ್‌ಸಿಕಾಗದ್. ಹಂಗೇನಾರ್ ಉಕ್ಕಿ ಹೋದರೆ ಆ ಕೂಡ್ಲೆ ನಾಲ್ಕ್ ಅಗಳ್ ಅನ್ನನ ಒಲೆಗೆ ಹಾಕೊಕುಗಡ. ಹಂಗೆ ಮಾಡದಿದ್ದರೆ ಹಸ್‌ನ ಕೆಚ್ಚ್‌ಲ್ ಒಡ್ಡದೆಗಡ. ದೇವ್ರ ದೀಪನ ಉರ್‌ಗಿ ತುಂಬಿಕಾಗದ್. ತುಂಬುದುತೇಳಿರೆ ಕೆಡ್ಸುದುತ ಅರ್ತ. ದೀಪನ ಉರ್‌ಗಿ ಕೆಡ್ಸಿರೆ ಅಗ್ನಿ ಅಸುದ್ದ ಆದೆಗಡ. ಇರ್ಲ್ ಎಲ್ಲಾ ಮನೆಗಳ ದೀಪಗ ಒಂದ್ ಮರಲಿ ಕುದ್ದವೆಗಡ. ಆಗ ಆ ದೀಪಗ ಅವ್ರವ್ರ ಮನೆ ಕಥೆ ಹೇಳಿಕಂಡವೆಗಡ. ಯಾವ್ದಾರ್ ದೀಪ ತಡಾಗಿ ಆ ಮರಕ್ಕೆ ಹೋದರೆ ಬಾಕಿ ದೀಪಗ ತಡಾಗಿ ಬಂದದ್ ಯಾಕೆಂತ ಕೇಳಿವೆಗಡ. ಆಗ ತಡ ಆಗಿ ಬಂದ ದೀಪಗ ತಮ್ಮ ತಮ್ಮ ಮನೆಗಳ ಕತೆ–ವ್ಯತೆನ ಹೇಳಿಕಂಡವೆ.

ಗಂಡ ಹೆಣ್ಣ್‌ನ ಜಗಳಂದಾಗಿ ಮನೆವು ಉಂಬೊದು ತಡ ಆತ್‌ತ ಒಂದ್ ದೀಪ ಹೇಳ್ರೆ, ಮತ್ತೊಂದು ದೀಪ ತನ್ನ ಮನೆಲಿ ಎಡೆ ಇಕ್ಕ್‌ತಿದ್ದೊತ ಹೇಳ್ದೆ. ಇನ್ನೊಂದ್ ದೀಪ ಕಾಯ್ಲುಲಿ ಮಲ್ಗಿದವರ ಕುರ್ತ್, ಹೆರಿಗೆ ಆದ್ದರ ಕುರ್ತ್, ಮಕ್ಕ ಓದ್‌ತಿದ್ದರ ಹಿಂಗೆ, ಅಂದ್ ಹಳ್ಳಿ ಜನ ಜೀವನದ ಬಗ್ಗೆ ದೀಪ ಕತೆ ಹೇಳ್ತಿತ್ತ್‌ತ ಜನಪದರ ಮಾತ್.

ಮಕ್ಕ ಹಲ್ಲ್ ಕಿತ್ತ್, ಆ ಹಲ್ಲ್‌ನ ಸಗ್‌ಣಿ ಉಂಡೆಯೊಳಗೆ ಹಾಕಿ, ಆ ಉಂಡೆನ ತಲೆ ಸುತ್ತ ತಂದ್, ನಡೂ ಅಂಗಳಲಿ ನಿತ್ತ್‌ಕಂಡ್ "ಚಾಮೆವ್ವಾ ಚಾಮೆವ್ವಾ ನನ್ನ ಹಳೇ ಹಲ್ಲ್‌ನ ನೀ ತಕ್ಕಂಡ್, ನಿನ್ನ ಹೊಸಾ ಹಲ್ಲ್‌ನ ನಂಗೆ ಕೊಡು"ತೇಳಿ ಮನೆದ್ ಮಾಡ್ ಮೇಲೆ ಬಿಸಾಕ್‌ತಿದ್ದೊ. ಹಂಗೆ ಮಾಡಿರೆ ಕೊಂಬಟೆ ಹಲ್ಲ್ ಬಾದುಲೆತ ಅಂದ್‌ನವರ ನಂಬಿಕೆ.

ಇದೆಲ್ಲಾ ಒಂದ್ ಕಾಲಲಿ ಹಳ್ಳಿಲಿ ಇತ್ತ್. ಇಂದ್ ಇಲ್ಲೆತ ಅಲ್ಲ. ಕೆಲವು ಜನ ಈ ನಂಬಿಕೆ, ಸಂಪ್ರದಾಯ ಕಟ್ಟ್‌ಪಾಡ್‌ನ ಇನ್ನೂ ಹಂಞ ಇಸಿಕಂಡೊಳೊ. ಹಳ್ಳಿ ಜನರೇ ನಗರಲಿ ವಾಸ ಮಾಡ್ತಾ ಇರ್ದು. ಆದರೆ ನಗರಲಿ ಈ ಕಟ್ಟ್‌ಪಾಡು ಎಲ್ಲ್ಯುಟ್ಟು? ಡೈರಿಲಿ ಹಾಲ್ ಸಿಕ್ಕಿದೆ. ಹಾಲ್‌ನೂ, ಮೊಸ್ರುನೂ, ಮಜ್ಜಿಗೆನೂ ಒಟ್ಟಿಗೆ ತಕ್ಕೊಂಡೋದುಲೆನಾ? ಗ್ಯಾಸ್ ಬಂದ ಮೇಲೆ ಒಲೆ ತಿಂಟೆ ಉಟ್ಟಾ? ಹಿಂದೆನವರ ನಡೆ ನುಡಿತೇಳಿರೆ "ಚಿನ್ನದಂತಾ ಪೆಟ್ಟಿಗೆ ಚಿನ್ನಾರಿ ಪೆಟ್ಟಿಗೆ, ಮುಚ್ಚೊಳ ತೆಗ್ದರೆ ಮುನ್ನೂರು ಪೆಟ್ಟಿಗೆ" ಆಹಾ! ಅದ್ ಸಿಂಹಿ ಜೇನ್ ಹನಿ.

* * * * *

# ಕಾಲ-ಕೋಲ

ಒಂದ್ ಕಾಲಲಿ ಬತ್ತ ಕುಟ್ಟುದೇ ಹೆಣ್ಮಕ್ಕಳಿಗೆ ಒಂದ್ ಸವಾಲಾಗಿತ್ತ್. ಕುಸಲಕ್ಕಿ ಮಾಡ್ದುತ್ತಾದರೆ ಹಂಞ ಕೆಲ್ಸ ಜಾಸ್ತಿ. ಬತ್ತ ಬೇಸೊಕು, ಒಣಗ್‌ಸೊಕು, ಕುಟ್ಟೊಕು. ಎಷ್ಟೋ ಮನೆಗಳ್‌ಲಿ ಬೇಸುದು, ಒಣ್‌ಗುಸುದು ಮತ್ತೆ ಕುಟ್ಟುದು ಪೂರಾ ಹೆಣ್ಮಕ್ಕಳ ಕೆಲ್ಸನೇ ಆಗಿತ್ತ್. ಬತ್ತ ಕುಟ್ಟುವ ಕೊಟಗೆಂತೇ ಬೇರೆ ಇರ್ತಿತ್. ಬತ್ತ ಕುಟ್ಟುವ ಕೊಟಗೆದ್ ನೆಲ ಲಾಯ್ಕ ಒಣಂಗಿರೊಕು. ನರ್‌ಗುಳಿಗೆ ಚಿಪ್ಪಿ ಕೂರ್‌ಸಿ, ಅದರ ಬಾಯಿನ ಕಲ್ಲ್‌ಲಿ ಲಾಯ್ಕ ಉಜ್ಜಿ ಉಜ್ಜಿ ನುಣ್ಣಂಗೆ ಮಾಡ್ತಿದ್ದೊ. ರಾಟೆನ ಮೆಟ್ಟುವ ಜಾಗೆಲಿ ಕೆಳಗೆ ಸಣ್ಣ ಗುಂಡಿ ಇರ್ತಿತ್ತ್. ಹಿಡ್ಕಂಬಕೆ ಬಿಟ್ಟಂದ ಒಂದ್ ಹಗ್ಗನ ನೇತಲಾಡಿಸ್‌ತಿದ್ದೊ. ಸಣ್ಣ ಎರಡ್ ಕಂಬಲಿ ರಾಟೆನ ಕೂರ್‌ಸ್‌ತಿದ್ದೊ. ರಾಟೆ ತುದಿಗೆ ಕಬ್ಬಿಣದ ಒಂದ್ ಬಳೆ ಇರ್ತಿತ್ತ್. ರಾಟೆ ತಲೆ ಮೇಲೆ ತೂಕ ಜಾಸ್ತಿ ಆಕೆ ಕಲ್ಲ್ ಕಟ್ಟ್‌ತಿದ್ದೊ. ರಾಟೆ ಸರಿಯಾಗಿ ನರ್‌ಗುಳಿಗೆ ಬೀಳೊಕು. ಹಂಞ ಆಚೆ ಈಚೆ ಬಿದ್ದರೆ ನರ್‌ಗುಳಿ ಎಳ್ಳಿ ಹೋದೆ. ಹಂಗೆ ಸರಿಯಾದ ವ್ಯವಸ್ಥೆ ಮಾಡಿಕಂಡ್ ಬತ್ತ ಕುಟ್ಟುತ್ತಿದ್ದೊ. ನರ್‌ಗುಳಿ ಬಾಯಿಗಿಂತ ಮುಂದೆ ಬತ್ತನ ರಾಶಿ ಹಾಕ್‌ತಿದ್ದೊ. ನಾಕ್ ಪರೆ ಬತ್ತನೊ, ಎಂಟ್ ಪರೆ ಬತ್ತನೋ ಆ ದಿನ ಒಬ್ಬಿಗೆ ಕುಟ್ಟಿಕೆ ತಾಕತ್ ಇರುವಸ್ಟ್ ಬತ್ತ ಹಾಕಂಬತಿದ್ದೊ. ಒಂದ್ ಪರೆಂತೇಳಿರೆ ಹತ್ತ್ ಸೇರ್. ಆಗೆಲ್ಲಾ ಸೇರ್ ಲೆಕ್ಕಲಿ ಅಳ್ತೆ ಮಾಡ್ತಿದ್ದೊ. ಚಟಾಕ್, ಪಾವು, ಮಾನ, ಸೇರ್, ಪರೆ, ಬಟ್ಟಿ ಹಿಂಗೆ ಇತ್ತ್ ಅಂದ್‌ನ ಲೆಕ್ಕ. ಹದ್ನೈದ್ ಬಟ್ಟಿಗೆ ಒಂದ್ ಗಾಡಿಂತ ಹೇಳ್ತಿದ್ದೊ. ನೀವಿಗೆ ಬತ್ತ ಎಸ್ಟಾತ್‌ತ ಕೇಳಿರೆ ಗಾಡಿ ಲೆಕ್ಕಲಿ ಹೇಳ್ತಿದ್ದೊ. ನೀವಿಗೆ ಎಸ್ಟ್ ಏಕರೆ ಗದ್ದೆಂತ ಕೇಳ್ತಿತ್‌ಲೆ. ಎಸ್ಟ್ ಬಟ್ಟಿ ಭೂಮಿಂತ ಕೇಳ್ತಿದ್ದೊ. ನೂರ್ ಬಟ್ಟಿ 'ಭೂಮಿತೇಂಳಿರೆ ಓ! ಪರೋಲಿಲ್ಲೆಂತ' ಕುಸಿಪಡ್ತಿದ್ದೊ. ಐನೂರ್, ಸಾವ್ರ ಬಟ್ಟಿಂತೇಳಿರಂತೂ ಬುಡಿ, ಅಂವ ಆ ಊರಿಗೆ ಶ್ರೀಮಂತತ ಕೊಂಡಾಟ

ಮಾಡ್ತಿದ್ದೊ. ಹೆಣ್ಣ್ ಕೊಡೊಕೊರೆ ಅಂವಂಗೆಸ್ಟ್ ಬಟ್ಟಿ ಭೂಮಿ ಉಟ್ಟುತ ಕೇಳಿಯೇ ಹೆಣ್ಣ್ ಕೊಡ್ತಿದ್ದದ್. ಮತ್ತೆ ಎಸ್ಟ್ ಕಂಡಿ ಕಾಫಿ ಆದೆಗಡಾಂತ ಕೇಳ್ತಿದ್ದ ಕಾಲ ಬಾತ್. ಈಗೆಲ್ಲಾ ಎಸ್ಟ್ ಚೀಲ, ಎಸ್ಟ್ ಟನ್ ಕಾಫಿ ಆದೆಗಡ, ಕಾರ್ ಎಸ್ಟನೇ ಮಾಡೆಲ್‌ದ್, ಅತ್ತೆ ಮಾವ ಒಳನಾತ್ತೆಲ್ಲಾ ಕೇಳಿ ಹೆಣ್ಣು ಕೊಡುವ ಕಾಲ ಬಂದೋವುಟು.

ಆಗೆಲ್ಲಾ ಅಂಗ್ಡಿಂದ ಅಕ್ಕಿ ತಾತಿದ್ದವು ಕಮ್ಮಿ. ಹಂಗೆ ಅಕ್ಕಿ ತಾತಿದ್ದವರ "ಈಃ ಅವು ಅಂಗ್ಡಿಂದ ಅಕ್ಕಿ ತಾದುಗಡಾತ" ಕಮ್ಮಿ ತರಲಿ ಕಾಂಬತಿದ್ದೊ. ತೂಕ ಮಾಡಿ ತರುವ ಅಕ್ಕಿ ಎಸ್ಟ್ ಇರ್ದು? ಅದ್ ಎಸ್ಟ್ ದಿನಕೆ ಬಾದುತ ಹೇಳ್ತಿದ್ದ ಕಾಲ ಅದ್.

ಕಾಲಿ ಚೀಲನೇನಾರ್ ಸುತ್ತಿಕಂಡ್ ಕಂಕ್‌ಳ್‌ಲಿ ಸೆಕ್ಕಿಕಂಡ್ ಹೋಗುವವರ ಕಂಡರೆ... ಅವ್ಕೆ ತಿಂಬಕೆ ಇಲ್ಲೆಗಡ. ಅರ್ಧ ಬಟ್ಟಿ ಬತ್ತ ಸಾಲ ತಾಕೆ ಹೋದುಗಡತ ಕೀಳಾಗಿ ಮಾತಾಡ್ತಿದ್ದೊ. ಆಗೆಲ್ಲಾ ಎಷ್ಟೇ ಕಷ್ಟ ಆದರೂ ನಾಕ್ ಕಾಳ್ ಬತ್ತ ಬೆಳ್ದೇ ಬೆಳೆತಿದ್ದೊ. ಗೊರ್ಜಿ ಗದ್ದೆ ಮನಿ ಆಗಿದ್ದರೆ ಗದ್ದೆನ ಕೊಚ್ಚಿ ನಾಟಿ ನಡದೆ ಬುಡ್ತಿತ್‌ಲೆ. ಸೋಲೆ ಗದ್ದೆನೂ ನಡ್ತಿದ್ದೊ. ಸೋಲೆ ಗದ್ದೆತೇಕ್ರೆ ಒಂಥರಾ ಕೆಂಪು ನೀರ್ ಕೆನೆ ಕಟ್ಟಿಕಂಡಿದ್ದದೆ. ಅಂಥಾ ಗದ್ದೆಲಿ ನಾಟಿ ನಟ್ಟರಂತೂ ನಟ್ಟ ನಾಟಿ ನಟ್ಟಂಗೇ ಇದ್ದ್ ಕಡೇಲಿ ಒಂದೆರ್ಡ್ ಕದ್ರ್ ಬಂದರೆ ಪುಣ್ಯ. ಮಾನಿ ಗದ್ದೆ ಮನಿ ಆತೋ ಬಿಂದಿಗೆಲಿ ನೀರ್ ಹೊತ್ತ್ ತಂದ್ ಹೊಯ್ದ್ ಕೆಸ್ರ್ ಮಾಡಿ ನಾಟಿ ನಟ್ಟವೂ ಒಳೊ.

ಅದಿರ್‌ಲಿ, ನಮ್ಮ ಬತ್ತ ಕುಟ್ಟುವ ಪರದಾಟ ಹೆಂಗಿತ್‌ತ ನೋಣೊ. ಹೆಣ್ಮಕ್ಕಳ್ದ್ ಯಂತ್ರದಂಗೆ ದುಡಿಮೆ. ಸೊಂಟ ಬೇನೆನೊ, ಮತ್ತೊಂದೊ... ಬೆಳಿಗ್ಗೆ ಎದ್ದ್ ಅಡ್ಗೆ ಮಾಡಿ ಉಂಬಕೆ ಕೊಟ್ಟ್, ಬುತ್ತಿ ಕಟ್ಟಿ ಮಕ್ಕಳ ಇಸ್ಕೂಲಿಗೆ ಕಳ್ಸಿ, ಕೊಟಗೆಗೆ ಹೋಗಿ ಕರ್‌ಬುಟ್ಟ್, ದನಗಳ ಮೇಯಕೆ ಬುಟ್ಟ್, ಇಲ್ಲರೆ ಮೇಯಕೆ ಕಟ್ಟಿ, ಹಟ್ಟಿ ಬಾಚಿ, ಮಧ್ಯಾಹ್ನಕ್ಕೆ ಉಂಬಕ್ಕೇನಾರ್ ಮಾಡಿ ಗಂಡನೊಟ್ಟಿಗೆ ಗದ್ದೆಗೋ ತೋಟಕೋ ಹೋಕಾಗಿತ್ತ್. ಅಷ್ಟೇ ಅಲ್ಲ, ಅದ್ರೊಟ್ಟಿಗೆ ಬತ್ತ ಕುಟ್ಟುವ ಕೆಲ್ಸನೂ ಇರ್ತಿತ್. ವಾರಕ್ಕೋ ಹದ್ನೈದ್ ದಿನಕ್ಕೋ ಒಮ್ಮೆ ಇರ್ತಿದ್ದ ಕಾಯಂ ಕೆಲ್ಸ ಅದ್. ಕುಟ್ಟುಕನ ಒಬ್ಬಳೇ ಇದ್ದರಂತೂ ಬೇಡ ಪಾಡ್. ಕುಟ್ಟಿಕಂಡೇ ಕೂಡಿಕಣೊಕು, ಕುಟ್ಟಿಕಂಡೇ

ಬಾಚಿಕಣೊಕು. ಅಡ್ಕೆ ಮರದ ಕೈನ ಅಳ್ತೆಗೆ ಸರಿಯಾಗಿ ತುಂಡ್ ಮಾಡಿ ಅದರ ಕೊಕ್ಕೆನ ದೊಣ್ಣೆ ತುದಿಗೆ ಕಟ್ಟಿ ಆ ಕೊಕ್ಕೆಂದ ಕೂಡ್ಸುದು, ಮತ್ತೆ ನರ್‌ಗುಳಿಂದ ತೆಗೆದ್ ಮಾಡಕ್ಕಾಗಿತ್ತ್. ಒಮ್ಮೆ ಕುಟ್ಟಿ ಆದ ಮೇಲೆ ಮತ್ತೊಮ್ಮೆ ಕುಟ್ಟೊಕು. ಮತ್ತೆ ಒಡ್ಕಿ ತೊಳ್ಸುದುತ ಮೂರನೇ ಸತಿ ಕುಟ್ಟೊಕು. ಉಮ್ಮಿ, ತೌಡು, ಇಡಿ ಅಕ್ಕಿ, ಕಡೆ ಅಕ್ಕಿ, ನುಚ್ಚಿಂತ ಬೇರೆ ಬೇರೆ ಮಾಡಿ ಆಕನ ಸಾಕ್ ಬೇಕ್ ಆತಿತ್. ಅಕ್ಕಿನ ಒಂದ್ ಕುಕ್ಕೆಗೆ ತುಂಬ್‌ಸಿ ಅಕ್ಕಿ ಮೇಲೆ ಗೆರೆ ಎಳೆತಿದ್ದೊ. ಯಾಕೆ ಗೆರೆ ಎಳೆತಿದ್ದೊಂತೇಳ್‌ವ ಪ್ರಶ್ನೆ ಉಟ್ಟು. ಯಾಕೆಂತೇಳಿರೆ ಆ ಕುಕ್ಕೆಂದ ಅಕ್ಕಿನ ಆ ಕಡೆವು ಈ ಕಡೆವು ಯಾರಾರ್ ತೆಗ್ದರೆ ಅವುಳಿಗೆ ಗೊತ್ತಾತಿತ್ತ್. ಸರಿ, ಹಿಂಗೆ ಕುಟ್ಟಿಕಂಡಿರಕನ ಮನೆಗೆ ಯಾರಾರ್ ಬಂದರಂತೂ ಕೆಲ್ಸ ನಿಲ್ಸಿದಂಗಲ್ಲ ಬಂದವರ ಮಾತಾಡ್ಸಿದಂಗಲ್ಲ. ಅಷ್ಟೊತ್ತಿಗೆ ಮೇಯಕೆ ಕಟ್ಟಿದ ದನ ತುಂಡ್ ಮಾಡಿಕಂಡ್ ಒಂದೋ ಗದ್ದೆಗೆ ಇಲ್ಲರೆ ಅಂಗಳ ಕರೆಲಿರ್‌ವ ಹೂ ಗಿಡ ಮೇಯಕೆ ಬಂದ್‌ಬುಟ್ಟದೆ, ಇಲ್ಲರೆ ಮುಚ್ಚಿಕೆ ಸಿಕ್ಕದ ಕೋಳಿಗ ಬಂದವೆ. ತಕಣಿ, ಇಸ್ಕೂಲ್‌ಂದ ಮಕ್ಕ ಪುಕಾರ್ ತಕಂಡ್, ಮರ್ಟ್‌ಕಂಡ್ ಸಣ್ಣಂವ ಚೆಡ್ಡಿಗೆ ಪೂರಾ ಮಾಡಿಕಂಡ್ ಬಂದರಂತೂ ಅಯ್ಯೆದ್ ಗೋಳುನ ಯಾರೊಟ್ಟಿಗೆ ಹೇಳ್ದು? ಅದರ್‌ನ್ನೆಲ್ಲಾ ಸರಿಮಾಡಕಂಡ್ ಕೆಲ್ಸ ಮಾಡ್ತಿದ್ದ ಆ ಹೆಣ್ಣ್ ಗಟುಗುತಿನೇ ಹೌದು.

ಕೆಲವ್ ಮನೆಗಳ್‌ಲಿ ಅಪ್ಪ, ಅವ್ವ, ಮಕ್ಕ ಎಲ್ಲ ಸೇರಿಕಂಡ್ ಇರ್‌ಲ್ ಬತ್ತ ಕುಟ್ಟುತ್ತಿದ್ದೊ. ಕೆಲವು ಸಣ್ಣ ಮಕ್ಕ ಆಗ ಮಜಾ ತಕಂಬತಿದ್ದೊ. ಅಯ್ಯೆ ಕುಟ್ಟಕನ, ಮಕ್ಕ ರಾಟೆಲಿ ಕುದ್ದ್‌ಕಂಬತಿದ್ದೊ. ಒಬ್ಬ ಮುಂದೆ, ಒಬ್ಬ ಹಿಂದೆ ರಾಟೆ ಮರಲಿ ಕೂರ್‌ತಿದ್ದೊ. ಹಿಂದೆ ಕುದ್ದಂವ ಮುಂದೆ ಕುದ್ದವನ ಸೊಂಟನ ತಬ್ಬಿ ಹಿಡ್ಕಂಡರೆ ಮುಂದೆ ಕುದ್ದಂವ ರಾಟೆದ್ ಅಡ್ಡ ಹಿಡಿನ ಕುದ್ರೆದ್ ಕೆಮಿನ ಹಿಡ್ಕಂಡಂಗೆ ಹಿಡ್ಕಂಬತಿತ್. ಕೆಲವ್ ಉಂಡೆ ಕಾಪಿನ ಬೇಳೆ ಮಾಡ್ಕಂಬತಿದ್ದೊ. ಉಂಡೆ ಕಾಪಿನ ಕುಟ್ಟಕನ ಅದ್ ಅಸ್ಟ್ ಅಗಲ ರಟ್ಟುದು, ಅದರ್‌ನ ಮಕ್ಕ ಹೆರ್ಕುದು ಹಿಂಗೆ ಮಕ್ಕಳಿಗೆ ಏನೋ ಒಂಥರದ ಅನುಭವ ಆತಿತ್. ಹಿಂದೆಲ್ಲಾ ಒಂದ್ ನರ್‌ಗುಳಿಲಿ ಇಬ್ಬರ್ ಮೂರ್ ಜನ ಒಂದೇ ಸತಿ ಒನಕೆಂದ ಕುಟ್ಟುತಿದ್ದೊ. ಅರೆ! ಇದೆಂಗೆತ ಆಶ್ಚರ್ಯ ಆತಿತ್. ಒಂದಕ್ಕೊಂದ್ ಮುಟ್ಟುದಾಗಲಿ, ಹೆಟ್ಟುದಾಗಲಿ ಆತಿಲ್ಲೆ. ಅಸ್ಟೊಂದ್ ಏಕಾಗ್ರತೆ ಇರ್ತಿತ್. ಎರ್ಡ್ ಪಾತ್ರೆಗ ಇದ್ದರೆ ಸದ್ದ್ ಹೆಚ್ಚ್‌ಂತ ಹೇಳಿವೆ.

ಹಂಗೆ ಇಬ್ಬರ್ ಮೂರ್ ಜನ ಇದ್ದಲ್ಲಿ ಮಾತಿಗೆ ಮಾತ್ ಕೂಡಿ ಬಾದು ಕಮ್ಮಿ. ಲಡಾಯಿ ಆಗಿ ಕೆಲ್ಸ ಬಾಕಿ ಆಬುಟ್ಟದೆ. ಸರಿ, ಈಗ ಮನೆಗಳ್ಲಿ ಒನಕೆಯಾಗಲಿ, ರಾಟೆಯಾಗಲಿ, ಮಜ್ಜಿಗೆ ಗುತ್ತಿಯಾಗಲಿ ಉಟ್ಟಾ? ಮೂಲೆ ಸೇರಿಟ್ಟೊ, ಅಟ್ಟ ಸೇರಿಟ್ಟೊ ಇಲ್ಲೆ ಊರ್ ಬುಟ್ಟುಟೊ? ಮಜ್ಜಿಗೆ ಕಡೆಕನ ಅಂದ್ "ದರುಬುರು ಬೊಮ್ಮಕ್ಕ, ಮಜ್ಜಿಗೆ ಕಡೆವ ತಿಮ್ಮಕ್ಕ, ಬೆಣ್ಣೆ ತಿಂಬ ಮುದ್ದಪ್ಪಂತ" ಹೇಳ್ತಿದ್ದ ಪದ ನಿಮ್ಮಲ್ಲಿತ್ತಾ? ಅಂದ್ ಇತ್ತ್ ಇಂದ್ ಇಲ್ಲೆ. ಅಯ್ಯೋ ಬುಡಿ ಕುಪ್ಪಿ ಅಲ್ಲಾಡ್ಸಿ ಮಜ್ಜಿಗೆ ಕಡೆವ ಕಾಲ ಇದ್'ತ ನಿಮಿಗೆಲ್ಲ ನಗೆ ಬಾದುತ ಕಂಡದೆ. ಮಕ್ಕ ರಾತ್ರಿ ಉಂಡ್ ಮಲ್ಗಿದ ಮೇಲೆ ಕೆಲವು ಬತ್ತ ಕುಟ್ಟುತ್ತಿದ್ದೊ. ಊರೊಳಗೆ ಹಂಗೆ ಯಾರ್‍ಯಾರ್ ಬತ್ತ ಕುಟ್ಟಿರೆ ದಡ್ಡ್ ದಡ್ಡ್'ತ ರಾಟೆ ಸದ್ದ್ ಕೇಳ್ತಿತ್ತ್. ಊರುನ ಹಬ್ಬಕ್ಕೆ ಬೇಕಾದ ಅವಲಕ್ಕಿ ಕುಟ್ಟುವ ಒನಕೆ ಸದ್ದೂ ಸನ ಕೇಳ್ತಿತ್ತ್. ಕಾಲ ಬಂದಂಗೆ ಕೋಲ ಕಟ್ಟುದುತ ಹೇಳ್ವಂಗೆ ಪರಿಸ್ಥಿತಿಗೆ ಹೊಂದಿಕಂಡ್ ಹೋದು ಜಾಣತನ.

* * * * *

# ರೈತಂಗೆ ಸಮ ಯಾರೊಳೊ?

ಹೇಳಿಕೇಳಿ ನಮ್ಮದ್ ಕೃಸಿ ಪ್ರಧಾನ ದೇಶ. ಕಾಲಕ್ಕೆ ತಕ್ಕಂಗೆ ಬೆಳೆ ಬೆಳ್ಕಂಬುದು ಅವರವರ ಬುದ್ಧಿವಂತಿಕೆ. ಗದ್ದೆ ಹೊಲಕ್ಕೆಲ್ಲಾ ಎತ್ತ್‌ಗಳ್ನೇ ನಂಬಿಕಂಡಿದ್ದ ಕಾಲ. ಸುರೂಗೆ ಗದ್ದೆ ಹೂಡಿಕೆ ಎತ್ತ್ ಕಟ್ಟುದು ಸಾಮಾನ್ಯಾಗಿ ಉಗಾದಿ ಇಲ್ಲರೆ ಬಿಸುಲಿ. ಅದ್ ಬುಟ್ಟರೆ ಕರಣ ನೋಡಿ ಎತ್ತ್ ಕಟ್ಟಿವೆ. ಹೂಡಿಕೆ ಎತ್ತ್‌ಗಳ್ನೇ ಕಟ್ಟುದು ನಡ್ದ್ ಬಂದ ಪದ್ಧತಿ. ಆದರೆ ಕೆಲವು ಜನ ಗೊಡ್ಡಿ ಹಸ್‌ಗಳ್ನ ಕಟ್ಟ್‌ತಿದ್ದೊ. ಎತ್ತ್‌ನೊಟ್ಟಿಗೆ ಕೋಣನ ಕಟ್ಟ್‌ದ್‌ಲೆ. ಆದರೆ ಹಂಗೆ ಕಟ್ಟಿ ಹೂಡ್ದವ್ರೂ ಒಳೊ. ಸೋಮೊರ ಹೂಟೆಗೆ ರಜೆ. ಹೂಟೆಂತೇಳಿರೆ ಹೂಡ್ದುತ ಅರ್ಥ. ಸೋಮೊರ ಹೂಟೆ ಯಾಕೆ ಇಲ್ಲೆಂತೇಳಿರೆ ಅಂದ್ ದನ ಹುಟ್ಟಿದ ದಿನ ಗಡ. ಮತ್ತೆ ಯಾವ ಕಾರಣಕ್ಕೂ ನಡ್ ಹಗ್ಲ್ 12 ಗಂಟೆ ಕಳ್ದ ಮೇಲೆ ಹೂಡ್ದುಲೆ. ಅದೆಲ್ಲ ಅಂದ್ ಇದ್ದ ಕ್ರಮ. ಹೋರಿಗಳ ಕಾಯಿ ತಟ್ಟುದು, ಮೂಗುದಾರ ಕುತ್ತುದು ಹೋರಿಗಳ ತಿದ್ದಿಕೆ ಕಟ್ಟುದು ಇದ್ಕೆಲ್ಲಾ ಒಳ್ಳ ದಿನ ನೋಡಿಯೇ ಮಾಡ್ದು. ಯಾವ್ದೇ ಕೆಲ್ಸ ಸುರು ಮಾಡಕನ ಭೂಮಿ ತಾಯಿನ ಮತ್ತೆ ಮನೆ ದೇವ್ರುನ ಗ್ಯಾನ ಮಾಡಿಯೇ ಸುರು ಮಾಡ್ದು ಒಂದು ಪದ್ಧತಿ.

ಕರ್‌ಗಳಿಗೆ ಇಸುವ ಹೆಸ್ರ್‌ಗಳೊ ಕೇಳ್ದೇ ಒಂದು ಪೊರ್ಲು. ಸೋಮಾರ ಹೆಣ್ಣ್ ಕರ್ ಹುಟ್ಟಿರೆ ಚೋಮಿ, ಮಂಗ್ಳೊರಾದರೆ ಮಂಗಳ, ಹಿಂಗೆ ದಿನಕೆ ತಕ್ಕಂಗೆ ಹೆಸ್ರೂ ಇರ್ತಿತ್ತ್. ಚುಕ್ರಿ, ಚೆನಿಯಕ್ಕ, ಐತಕ್ಕ, ಚಿಟ್ಟೆ, ಕೆಂಪಿ, ಗೋಪಿ, ಗಂಗೆ, ಗೌರಿ, ಕಾಳಿ ಹಿಂಗೆಲ್ಲಾ ಹೆಸ್ರ್ ಇದ್ದದೆ. ಹೋರಿ ಕರ್‌ಗ ಮನಿ ಆದರೆ ಚೋಮಣ್ಣ, ಕರಿಯಣ, ಪಟಯ, ಮಾಣಿ, ಚುಂಡ, ಕೆಂಪ, ಬಟಿಯ, ಬಾಚ, ಗುರುವಣ್ಣ, ಬಸವ, ಚೆನಿಯ, ರಾಜ, ಮೋರಂತೆಲ್ಲಾ ಹೆಸ್ರ್ ಹಾಕಿವೆ.

ಕೃಸಿ ಕೆಲ್ಸಕ್ಕೆ ಕತ್ತಿ, ಕೊಟ್ಟು, ಪಿಕಾಸಿ ಇರುಂಪಾರೆ (ಹಾರೆ), ಬಾಚಿ, ಕೊಡ್ಲಿ, ಮಚ್ಚಿ, ತೊಡ್‌ಂಜ್, ಉಳಿ, ಮುಟ್ಟಿ, ಹಲ್ಲ್‌ಕತ್ತಿ, ನೇಗ್ಲ್, ಕುಕ್ಕೆ, ಬರ್ಜಿ, ಗೊರ್ಗ, ಮೊರ ಒಂದ್ರಿ, ಹಗ್ಗ, ಮಾಯ್ಪು, ಕೊಕ್ಕೆ, ಒಕ್ಲು ಜಳೆ, ಬೇಟಿ ಇಂಥದೆಲ್ಲಾ ಬೇಕಾದೆ.

ಹಳ್ಳಿಯವುಕೆ ಎಲ್ಲಾ ಕೆಲ್ಸ ಗೊತ್ತೇ. ಅವ್ರವ್ರ ಕೃಸಿ ವಸ್ತುಗಳ್ನ ಹೆಚ್ಚು ಕಮ್ಮಿ ಅವವೇ ಮಾಡ್ಕಂಬತಿದ್ದೊ. ಕಬ್ಬಿಣದ ವಸ್ತುಗಳ್ನ ಅಂಗ್ಡಿಂದ, ಇಲ್ಲರೆ ಕೊಲ್ಲನ ಹತ್ರಂದ ತಾತಿದ್ದೊ. ಕಬ್ಬಿಣದ ಕೆಲ್ಸ ಮಾಡವರ್ನ ಕೊಲ್ಲಂತ ಕರ್ದವೆ. ರೈತನೇ ನೇಗ್ಲ್ ಮಾಡ್ಕಂಬತಿತ್ತ್. ಗುಳನ ದುಡ್ಡ್ ಕೊಟ್ಟ್ ತಾತಿತ್ತ್. ಕುಂಬುಳಿ ಮರದ ನೇಗ್ಲ್ ಭಾರೀ ಲಾಯ್ಕ. ಆ ಮರನ ಕಡ್ದ್, ಅದರ ಬಡ್ಜಿ ನೇಗ್ಲ್ ಮಾಡ್ತಿದ್ದೊ. ಬಡ್ಚುದುಂತೇಳಿರೆ ಕೆತ್ತುದುತ ಅರ್ಥ. ಹುಣ್‌ಸೊಳಿ, ಪಣ್ಬುಳಿನೆಲ್ಲ ಬಡ್ದ್ ಬೀಳ್ಸುದರ ಬಡ್ಜಿ ಬೀಳ್ಸುದುಂತನೂ ಹೇಳಿವೆ. ನೇಗ್‌ಲ್‌ಲಿ ಕುಂಟೆ ನೇಗ್ಲ್, ಮತ್ತೆ ತುಳು ನೇಗ್ಲ್‌ತ ಎರ್ಡ್ ಥರ ಉಟ್ಟು. ಕುಂಟೆ ನೇಗ್ಲ್‌ದ್ ಹಿಡಿನ ಮೇಣಿಂತೇಳಿವೆ. ಉಯ್ಯಪಾರ್, ನೊಗ, ಕಣಿಕೋಲು, ತಮ್ಮಿ ಹಗ್ಗ, ಹೊರೆ ಕಟ್ಟುವ, ದನ ಕಟ್ಟುವ ಹಗ್ಗನೆಲ್ಲಾ ರೈತನೇ ಮಾಡ್ಕಂಬತಿತ್ತ್. ಅವಂಗೆ ಯಾವ ತರಬೇತಿನೂ ಇತ್ಲೆ. ಯಾವ ಸರ್ಟಿಫಿಕೇಟ್‌ನೂ ಇತ್ಲೆ. ನೋಡಿ ತಿಳಿ, ಮಾಡಿ ಕಲಿಂತೇಳುವ ತತ್ವ ಅವಂದಾಗಿತ್ತ್.

ಕೆಲ್ಸೆಲ್ಲಾ ಆದ ಮೇಲೆ ಕತ್ತಿನ ನೆಲದ ಮೇಲೆ ಇಸ್‌ತಿತ್ತ್‌ಲೆ. ಕತ್ತಿನ ಕೋಸಿಕೆಂತೇಳಿ ಬೇರೆ ವ್ಯವಸ್ಥೆ ಇರ್ತಿತ್. ಬೆದ್‌ರ್‌ನ ಗಂಟ್‌ಂದ ಗಂಟ್‌ಗೆ ಒಟ್ಟೆ ಮಾಡಿ ಗೋಡೆಗೆ ನೇತ್ ಹಾಕ್‌ತಿದ್ದೊ. ಅದರ್ನ ಕತ್ತಿ ನೇಕೆಂತ ಹೇಳಿವೆ. ಕತ್ತಿನ ಬೇಕ್ ಬೇಕಾದಲ್ಲಿ ಬಿಸಾಕುದಾಗಲಿ ಮಾಡ್ತಿತ್‌ಲೆ. ಕೆಲ್ಸ ಆದಂಗೆ ಕತ್ತಿನ ಆ ನೇಕೆಲಿ ಕೋಸ್‌ತಿದ್ದೊ. ಕತ್ತಿ ಬಾಯಿನ ಈ ಕಡೆ ಮಾಡಿ ಮಡ್ಗದು ಒಳ್ಳ ಕ್ರಮ ಅಲ್ಲ. ಕತ್ತಿ ಬಾಯಿ ಗೋಡೆ ಕಡೆಗೆ ತಿರ್‌ಗಿಸಿ ಮಡ್ಗಿರೆ ಕೈಗೆ ಕಾಲಿಗೆ ತಾಂಗಿ ಗಾಯ ಆದುಲೆ. ಹರ್ದಾಡುವ ಮಕ್ಕಳಿಗೆ ಕತ್ತಿ ಬಾಯಿ ಯಾವ್ದ್, ಕತ್ತಿ ಹಿಡಿ ಯಾವ್ದ್‌ತ ಗೊತ್ತಿರ್ದುಲೆ. ಕೊಟ್ಟು, ಪಿಕಾಸಿ ಹಿಂಗೆ ಯಾವುದೇ ಆಗಲಿ ಅದದ್ಕೆ ನಿಗದಿತ ಜಾಗ ಇರ್ತಿತ್ತ್. ಕೆಲ್ಸ ಆದ ಮೇಲೆ ಅದರ್ನೆಲ್ಲಾ ಅದದೇ ಜಾಗಲಿ ಇಸ್‌ತಿದ್ದೊ. ಕೊಟ್ಟು ಕೆಲ್ಸ ಆದ ಮೇಲೆ ಕೊಟ್ಟುಲಿ ಮಣ್ಣ್ ಅಂಟಿದ್ದರೆ ಅದರ ಲಾಯ್ಕ ತೊಳ್ದ್, ಇಲ್ಲರೆ ಕೊಟ್ಟುನ ಕುಟ್ಟಿ ಇಸುದು ಕ್ರಮ.

ಹೂಡುವ ಸಮೆಲಿ ಬೆಳ್ಕ್ ಹರೆಕೆ ಮುಂದೇ ಕೊಟ್ಟಗೆಗೆ ಹೋದರೆ ಸಾಕ್ ಹೂಡುವ ಎತ್ತ್‌ಗ ಮಾತ್ರ ಎದ್ದ್ ನಿತ್ತ್ ಉಚ್ಚೆ ಒಯ್ದ್ ಸಗಣಿ ಹಾಕಿ ಹೂಡಿಕೆ ಹೋಕೆ ತಯಾರಾಗಿ ನಿತ್ತ್‌ಕಂಬತಿದ್ದೊ. ಎತ್ತ್‌ಗಳ ಬಿಚ್ಚಿ ಬೆನ್ನ್ ಮೇಲೆ ಹಗ್ಗ ಹಾಕಿ ಬುಟ್ಟರೆ ಸೀದ ಗದ್ದೆ ಕಡೆ ಹೋತಿದ್ದೊ. ಗದ್ದೆಲಿ ಒಂದ್ ಕ್ರಮಲಿ ನಿಲ್ಲಿಕೆ ಎಳ್ದರೆ ಕೂಡ್ಲೆ ಎಡಬಲಕ್ಕೆ ನಿತ್ತ್ ನೊಗ ಇಸಿಕನ ತಲೆ ಬಗ್ಗ್‌ಸ್ತಿದ್ದೊ. ನೊಗಕ್ಕೆ ಕಣಿಕೋಲು ಇದ್ದದೆ. ಕಣಿಕೋಲಿಗೆ ಸುತ್ತ ಹಗ್ಗ ತಂದ್ ಕುತ್ತಿಗೆಗೆ ಸುತ್ತುವೆ. ಹಂಗೆ ಸುತ್ತುವ ಹಗ್ಗನ ತಮ್ಮಿ ಹಂಗಂತೇಳಿವೆ. ಮತ್ತೆ ಉಯ್ಯಪಾರ್‌ದ್ ಕರ್ಚೆಗೆ ನೊಗದ ನಡೂಲಿರುವ ಕುಣಿಕೆ ಹಗ್ಗನ ಸಿಕ್ಕಿಸಿ ಹುಂ ನಡೆನಿಂತೇಳಿರೆ ಸಾಕ್ ಎತ್‌ಗ ನೇಗ್ಲ್ ಎಳ್ಕಂಡ್ ನಡ್ದವೆ. ಹರಾಂತೇಳಿರೆ ನೆಟ್ಟಂಗೆ, ಈೀಂತೇಳಿರೆ ಎಡ್ಡ ಕಡೆಗೆ, ಟ್ರರ್ ಹರಾಂತೇಳಿರೆ ಅಷ್ಟ್ ದೂರಮುಟ್ಟ ನೆಟ್ಟಂಗೆ ನಡ್ದವೆ. ಹಾವ್‌ಂತೇಳಿರೆ ನಿಲ್ಲೊಕುಂತೇಳುವ ಭಾಷೆ ಎತ್ತ್‌ಗಳಿಗೆ ಪಾಠ ಆಗಿದ್ದದೆ. ಕೆಲವಂತೂ ಹೂಡಕನ ರಾಗ ಎಳ್ದ್ ಪದ ಹೇಳಿಕಂಡ್, ಎತ್ತ್‌ಗಳ ಹೆಸ್ರ್ ಹೇಳಿಕಂಡ್ ಹೂಡ್ದರ ನೋಡ್ದೇ ಒಂದ್ ಹಬ್ಬ. ಅಷ್ಟೊತ್ತಿಗೆ ಹುಲ್ಲ್‌ಕಂತೆನ ಹೊತ್ತ್‌ಕಂಡ್, ಕೈಲಿ ಕಾಫಿ, ರೊಟ್ಟಿ ಹಸ್ನಕ್ಕಿ ಪಜ್ಜಿದ್ ಬುತ್ತಿನ ಹಿಡ್ಕಂಡ್ ಮನೆಂದ ಯಾರಾರ್ ಬಂದವೆ. ಗದ್ದೆ ಪುಣಿಲಿ ರೊಟ್ಟಿನೂ ಹಸ್ನಕ್ಕಿ ಪಜ್ಜಿನೂ, ತಿಂದ್‌ಕಂಡ್ ಕರಿ ಕಾಫಿ ಹೀರ್ದು ಒಂಥರಾ ಮಜಾ ಕೊಟ್ಟದೆ. ಎತ್ತ್‌ಗ ಹುಲ್ಲ್ ತಿಂದ್ ಕುಸಿ ಪಟ್ಟವೆ. ಹಿಂಗೆ ಅಡ್ಡ ನೀಟತೇಳಿ ಆರ್ ಸಾಲ್ ಆಗೋಮುಟ್ಟ ಹೂಡಿವೆ. ಮತ್ತೆ ತಾವೆ ಮರ ಹೊಡ್ದ್ ಗದ್ದೆನ ಪರೆ ತಟ್ಟಿದಂಗೆ ಸಮಾ ಮಾಡಿ ನಾಟಿ ನಡಿಕೆ ತಯಾರ್ ಮಾಡಿವೆ. ಹೂಡಿ ಆದ ಮೇಲೆ ತೋಡೊಳಗೆ ಎತ್ತ್‌ಗಳ ನಿಲ್ಸಿಕಂಡ್ ಮೀಸಿವೆ. ಎತ್ತ್‌ಗಳಿಗೆ ಮೈ ಹಗುರ ಆದಂಗೆ ಯಜಮಾನಂಗೆ ಏನೋ ಒಂಥರ ತೃಪ್ತಿ. ಇದ್ಕೂ ಮುಂದೆ ಪುಣಿಕಡ್ದ್ ಕೆಳಗೆನ ಪುಣಿಗೆ ಮಣ್ಣ್ ಮಡ್ಗಿದ್ದವೆ. ಹಿಂಗೆ ಮಾಡಿ ಆಕನ ತಿಂಗ ಆದೂ ಉಟ್ಟು. ಅವರವರ ಗದ್ದೆ ವಿಸ್ತಾರ, ವ್ಯವಸ್ಥೆ ಇದ್ದಂಗೆ ಕೆಲ್ಸ ಆದೆ.

ಕೊಡ್‌ಗ್‌ಲಿ ಸಾಮಾನ್ಯಾಗಿ ಹೆಣ್ಮಕ್ಕ ಅಗೆ ಕೀಳ್ದು, ಗಂಡ್ ಜನ ನಾಟಿ ನಡ್ದು ಕ್ರಮ. ಏಕ್ಲ್‌ಲಿ ಅಗೆ ಪೂಜೆ ಮಾಡ್ದ ಮೇಲೆ ಅಗೆ ಕಿತ್ತವೆ. ಅಗೆ ಕೀಳಿಕೂ ಗೊತ್ತಿರೊಕು. ಸುರು ಸುರೂಲಿ ಗೂಡೆಗ ಅಗೆ ಕಿತ್ತವೆ. ಆಗ ಅಗೆ ತುಂಡಾದರೆ ಅಯ್ಯೆನ ಕೈಂದ ಪುರ್ಕ ಬಯ್‌ಗ್ಳ ಉಟ್ಟೇ ಉಟ್ಟು. ಅಗೆ ಕಿತ್ ಬುಡ ತೊಳ್ದ್ ಹಿಡಿ

ಕಟ್ಟಿವೆ. ಇಪ್ಪತ್ತ್ ಹಿಡಿಗೆ ಒಂದ್ ಗುಡ್ಡೆಂತ, ಐವತ್ತು ಹಿಡಿಗೆ ಒಂದ್ ಹೊರೆಂತೇಳಿವೆ. ಹಗೆಹಿಡಿನ ನಾಟಿ ಗದ್ದೆಗೆ ತಕ್ಕಂಡ್ ಹೋಗಿ ಪುಣಿ ಮೇಲೆ ಇಸಿಕಂಡ್ ಒಂದೊಂದೇ ಹಿಡಿನ ಗದ್ದೆಗೆ ಬಿಸಾಕುವೆ. ಅಗೆನ ಬಿಸಾಕಕನ ಆ ಹಿಡಿ ಗದ್ದೆಲಿ ಸರಿಯಾಗಿ ಕುದ್ದ್‌ಕಂಡದೆ. ಹಿಡಿ ಕಟ್ಟಕನ ಸಡ್ಲ ಆತೋ ಅಗೆ ಪೂರಾ ಚೆಲ್‌ಚೆಲ್ಲಾಗಿ ಹರ್‌ಂಡಿಕಂಡದೆ. ಇಷ್ಟ್ ದೂರಕ್ಕೆ ಇಷ್ಟ್ ಹಿಡಿ ಅಗೆಂತೇಳಿ ಕಣ್ಣ್ ಅಳತೆಲಿ ಅಗೆ ಹಿಡಿನ ಗದ್ದೆಗೆ ಬಿಸಾಕಿವೆ. ನಾಟಿ ನಡಕನ ದೇವ್ರ್‌ನ ನೆನ್ಸಿಕಂಡ್ "ಕಳಿ ಕಳಿಯಾಗಿ ಬಾ ನಾಟಿಂತೇಳಿ" ನಾಟಿ ನಟ್ಟವೆ. ಒಂದ್ ನುಲಿಂದ ಇನ್ನೊಂದ್ ನುಲಿಗೆ ಕಣ್ಣ್ ಅಳತೆ ದೂರ ಗೊತ್ತಿದ್ದದೆ. ಐದಾರ್ ಕಣೆಗೆ ಒಂದ್ ನುಲಿಂತೇಳ್ದು. ಒಂದ್ ಕಣೆಂತೇಳಿರೆ ಬತ್ತದ ಒಂದ್ ಗಿಡ. ಅನುಭವಿ ನಾಟಿ ನಡುವವ್ ಅಗೆ ಹಿಡಿಂದ ನುಲಿನ ಕೀಳ್ದು, ಗದ್ದೆಗೆ ಕುತ್ತುದು ಗೊತ್ತೇ ಆದ್ಲೆ. ಅಷ್ಟ್ ಚುರುಕು. ಇನ್ ಕೆಲವು ಕೊಡಿನಾಟಿ ನಟ್ಟವೆ. ಕೊಡಿ ನಾಟಿಂತೇಳಿರೆ ಸಾಲ್ ನಾಟಿಂತ ಹೇಳ್ದು. ಹಗ್ಗ ಹಿಡ್ದ್ ನಾಟಿ ನಟ್ಟಷ್ಟ್ ನೆಟ್ಟಂಗೆ ನಾಟಿ ನಟ್ಟವೆ.

ಈಗ ಅಡ್ಗೆ ಮನೆಲಿ ಮಿಷನ್ ರೊಟ್ಟಿ, ಗದ್ದೆಲಿ ಮಿಷನ್ ನಾಟಿ, ಹಿಂದೆ ಗದ್ದೆಲಿದ್ದ ಆಟ, ಕೂಟ, ತಮಾಷಿ ಮುಂದೆ ಬಂದದೆಯಾ?

* * * * *

# ಕರಿಗುತ್ತಿ ಗದ್ದೆ

ನಾಟಿ ಕಪ್ಪು ಹತ್ತಿಕಂಡ್ ಚೆಂಡೆ(ತಂಡೆ) ಹೊಡ್ಕಂಡ್‌ಂತೇಳಿರೆ ಬುಡ ಒಡ್ಕಂಡ್ ಬಾಕನ ಅದ್ರೊಟ್ಟಿಗೆ ಕಳೆನೂ ಬಂದದೆ. ಅಷ್ಟೇ ಅಲ್ಲ, ನಾಟಿ ಒಟ್ಟಿಗೆ ಚೂಂಡೆ ಗಿಡನೂ ನಾಟಿಗಿಂತಲೂ ಜೋರಾಗಿ ಬೆಳ್ಕಂಡ್ ಬಂದದೆ. ಕಳೆ ಕೆಲ್ಸ ಮಾಡಕನ ಅಂಥಾ ಚೂಂಡೆ ಗಿಡಗಳ್ನೂ ನೋಡಿ ನೋಡಿ ಕಿತ್ತ್‌ಕಣೊಕು. ಅಷ್ಟ್ ಸುಲಭಲಿ ಅದರ್ನ ಪತ್ತೆ ಮಾಡಿಕೆ ಆದುಲೆ. ಕೆಲವ್ ಗದ್ದೆಗಳ್‌ಲಿ ಕಳೆ ಇರ್ದುಲೆ ಆದರೂ ನಾಟಿ ನಡುವೆ ಕಾಲಾಡ್ಸೊಕು. ಕೈಲೊಂದು ಕೋಲ್ ಹಿಡ್ಕಂಡ್ ಎಡಕ್ಕೆ ಬಲಕ್ಕೆ ಎಲ್ಲಾ ನಾಟಿಗೂ ತಟ್ಟಿಕಂಡ್ ಹೋಕು. ನಾಟಿಲಿ ಹುಳಗ ಮನಿ ಇದ್ದರೆ ಆಗ ಅವು ನೀರಿಗೆ ಬಿದ್ದವೆ. ಆಗ ಕಪ್ಪೆ, ಚೆಂಯಿಂಪೆ, ಚರ್‌ಗ್, ಕೊಯ್ಲೆ ಮೀನ್‌ಗಳಿಗೆ ಮತ್ತೆ ನುಲಿ ಎಸಂಡ್‌ಗಳಿಗೆಲ್ಲಾ ಗದ್ದಾಳ. ಹಿಂದೆಲ್ಲಾ ನಾಟಿಗೆ ಯಾವ ಮದ್ದ್‌ನೂ ಹೊಡೆತಿತ್ತ್‌ಲೆ. ಮೀನ್‌ಗ ಎಷ್ಟ್ ಬೇಕಿತ್ತ್? ನುಲಿ ಎಸಂಡ್‌ಗ ಎಷ್ಟ್ ಬೇಕಿತ್ತ್? ಕಳೆ ಕೆಲ್ಸ ಮಾಡ್ದ ದಿನ ನುಲಿ ಎಸಂಡ್‌ದ್ ಗೈಪು ಇರ್ತಿತ್.

ನಾಟಿ ಪೂರಾ ಕಪ್ಪು ಹತ್ತಿಕಂಡ್ ಬಾಕನ ಗದ್ದೆನ ನೋಡ್ದೇ ಒಂದ್ ಪೊಲ್ರ್ಬ. ಗದ್ದೆಗೆ ದೃಷ್ಟಿ ಬೊಟ್ಟುಂತೇಳುವಂಗೆ ಕರಿಗುತ್ತಿ ನೆಡ್ತಾ ಇದ್ದೊ. ಕರಿಗುತ್ತಿಂತೇಳಿರೆ ಕರಿ ಮಾಡ್ದ ಬೆದ್ರ್. ಅದರ್ನ ಗದ್ದೆಗೆ ಉದ್ದೋಕೆ ನಡ್ತಿದ್ದೊ. ಸಾಲ್ ಆಗಿ ನಡ್ತಾ ಇದ್ದ ಆ ಕರಿ ಗುತ್ತಿ ಮೇಲೆ ಹಕ್ಕಿಗ ಕುದ್ದ್‌ಕಂಬತ್ತಿದ್ದೊ. ಆ ಹಕ್ಕಿಗ ನಾಟಿಗೆ ಹಿಡ್ದ ಹುಳಗಳ್ನ ಹಿಡ್ದ್ ತಿಂಬತಿದ್ದೊ. ಬೆತ್ತ್ ಕುತ್ತಿದ ಮೇಲಂತೂ ಹಕ್ಕಿಗ, ಪೋಳೆಗೆಲ್ಲಾ ಕುದ್ದ್‌ಕಂಡ್ ಮೇಚಿ ಮಾಡ್ತಿದ್ದೊ. ಕರಿಗುತ್ತಿ, ಬೆತ್ತ್-ಹಕ್ಕಿ ಒಂದಕ್ಕೊಂದ್ ಸಂಬಂಧ ಉಟ್ಟು.

ಗದ್ದೆ ಪುಣಿಲಿರುವ ಹುಲ್ಲ್‌ನ ಹಲ್ಲ್‌ಕತ್ತಿಂದ ಹೆರ್ದ್ ದನಗಳಿಗೆ ಹಾಕ್‌ತಿದ್ದೊ.

ದನಗಳಿಗೆ ಹೊಟ್ಟೆ ತುಂಬಿದಂಗೂ ಆತಿತ್, ಗದ್ದೆ ಪುಣಿಲಿ ಓಡಾಡಿಕೆ ಸುಲಭನೂ ಆತಿತ್. ಹಂಗಾಗಿ ಎಲಿಗಳ ಕಾಟ ಕಮ್ಮಿ ಆತಿತ್. ಆಗೆಲ್ಲಾ ಎಲಿ ಹಿಡೆಕೆ ಬೆದ್ರ್‌ದ್ ಕತ್ರಿ ಇಸ್‌ತಿದ್ದೊ. ಅಂಗ್ಡಿಂದ ಎಲಿ ಬೋನು ತಾತಿತ್‌ಲೆ.

ಒಮ್ಮೊಮ್ಮೆ ಮಳೆ ಇಲ್ಲದೆ ಗದ್ದೆ ಪೂರಾ ಒಣಂಗಿ ಹೋಗಿ ಒಡ್ಡ್ ಬಾಯಿ ಬಡ್ತ್‌ತಿತ್ತ್. ಆಗ ಮಳೆ ಬಂದರಂತೂ ಆ ಒಡ್ಕ್‌ಗೆಲ್ಲಾ ನೀರ್ ತುಂಬಿ ಗದ್ದೆ ಥಳಥಳಂತೇಳಕ ನಾಟಿ ಪೂರಾ ನಗಾಡಿಕಂಡ್ ದಿನಂದ ದಿನಕ್ಕೆ ಬೆಳ್ದ್ ನಿತ್ತದೆ. ನಾಟಿ ಒಡೆ ಕಟ್ಟಿಕಂಡ್ ಬಂದ್ ಯಾವ್ದಾರ್ ಗದ್ದೆಲಿ ಒಂದೇ ಒಂದ್ ಕದ್ರ್ ದಾಟಿರೆ ಸಾಕ್, ಗದ್ದೆಗೆ ಇಳ್ದ್ ಆ ಕದ್ರ್ ಬಂದ ನುಲಿದ್ ಸೋಗೆಗೆ ಉರುಳ್ ಗಂಟ್ ಹಾಕಿ ಮೂರ್ ಸತಿ ನಮಸ್ಕಾರ ಮಾಡಿ ಗೌರವ ಕೊಟ್ಟ್, ಮನೆಲಿ ಆ ಸುದ್ದಿನ ಹೇಳಿ ಖುಷಿಪಡ್ತಿದ್ದೊ. ಕದ್ರೆಲ್ಲಾ ಬಂದ್ ಹಾಲ್ ತುಂಬಿಕಂಡ್ ಬರ್ತಿದ್ದಂಗೆ ಸುರೂಲಿ ದಾಟಿದ ಕದ್ರ್‌ಗೆಲ್ಲಾ ಕಾಯಿ ಬಾಂಗಿಕಂಡ್ ಬಂದದೆ. ಆಗ ಸುಮ್ಮನೆ ಅಲ್ಲೊಂದ್ ಇಲ್ಲೊಂದ್ ಕದ್ರ್‌ದ್ ಬತ್ತನ ಲೆಕ್ಕ ಮಾಡ್ತಿದ್ದೊ. ಕಾಯಿ ಬಾಂಗಿಕಂಡ್ ಬಂದಂಗೆ 'ಬೆಳೆ ಬೆಳ್ದುಟ್ಟು, ಇನ್ನ್ ಬಗಲೆ ಕೆಲ್ಸ ಆಕುತ' ಆ ಕೆಲ್ಸನ ಮಾಡ್ತಿದ್ದೊ. ಹೆಣ್ಮಕ್ಕ ತಲೆ ಬಾಚಕನ ಮೂಕು ತುದೀಂದ ಹಣೆಗಾಗಿ ನೆತ್ತಿ ನಡೂಗೆ ತೋರು ಬೆರಳ್‌ಂದ ಗೆರೆ ಎಳ್ದಂಗೆ ಮಾಡಿ ಕುದೋಲ್‌ನ ಆಚೆ ಈಚೆ ಮಾಡಿ ತಲೆ ಬಾಚಿ ಜಡೆ ಹಾಕ್‌ತಿದ್ದೊ. ನೆತ್ತಿ ನಡೂನ ಗೆರೆನ ಬಗ್‌ತಲೆಂತೇಳಿವೆ. ಗದ್ದೆಲಿ ನೀರ್ ಬತ್ತುವಂಗೆ ಮಾಡುವ ಆ ಚರಂಡಿ ಕೆಲ್ಸನ ಬಗಲೆ ತೆಗೆದುಂತ ಹೇಳ್ದು.

ಬೆಳೆ ಬೆಳ್ಕಂಡ್ ಬರ್ತಿದ್ದಂಗೆ ಜೋರಾಗಿ ಗಾಳಿ ಬೀಸಿರೆ ದೋಂಬಾಗಿ ಬೆಳ್ದ ಬೆಳೆ ಚಾಪೆ ಹಾಸಿದಂಗೆ ಬಿದ್ದೋದೆ. ಗಾಳಿ ಒಂದೇ ದಿಕ್ಕ್‌ಂದ ಬೀಸಿರೆ ಪರ್ವಾಗಿಲ್ಲೆ. ಗಾಳಿ ತಾರಾಮಾರ ಬೀಸಿತೋ ಬೆಳೆನೂಸನ ತಾರಾಮಾರಾ ಚಿಕ್ಕ್ ಚಿಕ್ಕಾಗಿ ಬಿದ್ದು ಹೋದೆ. ದೋಂಬು ಬೆಳೆಂತೇಳಿರೆ ಗೊಬ್ಬರ ಹೆಚ್ಚಾಗಿ ಬೆಳೆ ಎತ್ತರಕ್ಕೆ ಬೆಳೆದುತ. ಅಂಥಾ ದೋಂಬು ಬೆಳೆಲಿ ಫಸಲ್ ಕಮ್ಮಿ. ಬೆಳೆ ಜಾಸ್ತಿ ಬೆಳ್ದ್ ಚುಗ್ಗಿಕೆ ಬತ್ತ್. ಚುಗ್ಗುದುಂತೇಳಿರೆ ಕದ್ರ್ ಪೂರಾ ಒಣಂಗಿ ಮುರ್ಕಂಡ್ ಬುಡದ ಕಡೆಗೆ ಬಗ್ಗಿದೆ. ಹಂಗೆ ಚುಗ್ಗಿದ ಬೆಳೆನ ಕೊಯ್ಯೊದು ಕಷ್ಟ. ನಷ್ಟನೂ ಬೇರೆ. ಬೆಳೆನ ಕೊಯ್ದ್ ಪರ್ಪುಲ್ ಹಾಕಿವೆ. ಹತ್ತಾರ್ ಬುಡನ ಕೊಯ್ದ್ ಒಂದೇ ಕಡೆ ಒಂದ್ ಕ್ರಮಲಿ ತೆಳ್ಳಂಗೆ ಹರಂಡಿವೆ. ಅದರ್ನ ಪರ್ಪುಲ್‌ಂತ ಹೇಳಿವೆ. ಬೆಳೆ ಕೊಯ್ಯಕನ

'ಬೆಳೆ ಹೂವು' ಸಿಕ್ಕಿರೆ ಏನಾಗಾರಲಿತ ಹೇಳಿಕಂಡ್ ಆ ಹೂವುದ್ ಅರಷ್ಣನ ಬೊಟ್ಟ್ ಹಾಕಂಡವೆ. ಒಂದ್ ಚೂರು ಬಾಯಿಗೂ ಹಾಕಂಡವೆ. ಬೆಳೆ ಹೂವು ಇರುವ ಬುಡನ ಕಡಿಕೆಗೂ ಕಟ್ಟಿವೆ. ಬೆಳೆ ಹೂವುಂತೇಳಿರೆ ಅದೊಂದು ಅರಷ್ಣ ಬಣ್ಣದ ಗೂಡು. ಮೂರು ನಾಲ್ಕ್ ನುಲಿನ ಕೂಡ್ಸಿ ಬಹುಶಃ ಜೇಡ ಕಟ್ಟಿದ ಗೂಡುಂತ ಕಂಡದೆ. ಈ ನಡುಲಿ ಮಕ್ಕ ಬೆಳೆ ದಂಟ್‌ನ ಪೀಪಿ ಮಾಡಿಕಂಡ್ ಪೀಂತ ಉರ್‍ಗಿಕಂಡ್ ಮಜಾ ತಕಂಡವೆ.

ಬೆಳೆ ಹೂವು ಇದ್ದರೆ ಪೊಲ್ಸ್ ಜಾಸ್ತಿಂತ ಮನೆಯವು ಖುಷಿಪಟ್ಟವೆ. ಪೊಲ್ಸ್‌ಂತೇಳಿರೆ ಬರ್ಕತ್ತ್‌ಂತ ಅರ್ಥ. ಸರಿ, ಹಿಂಗೆ ಕೊಯ್ದ್ ಹಾಕಿದ ಬೆಳೆನ ನಾಕಾರ್ ದಿನ ಬುಟ್ಟ್ ಹೊರೆ ಕಟ್ಟಿವೆ. ಕೆಲವ್‌ಕಡೆ ತಿಂಗೊಳು ಬೆಳ್ಕ್‌ಲಿ ಹೊರೆ ಕಟ್ಟಿವೆ. ಮಾರನೆಗೆ ಮಂಜಿ ಪೂರಾ ಆರ್‍ದ ಮೇಲೆ ಹೊರೆ ಹೊತ್ತವೆ. ಹೊರೆ ಸಣ್ಣದಾದರೆ ಎರ್‍ಡ್ ಹೊರೆನ ಒಮ್ಮೆಗೆ ಹೊತ್ತವೆ. ಹೊರೆನ ಹೆಂಗೆಂಗೋ ಹೊರ್‍ದುಲೆ. ಹೊತ್ತ್‌ಕಂಡ್ ನಡೆಕನ ಕದ್ರ್ ಜಾಸ್ತಿ ಅಲ್ಲಾಡದಂಗೆ ನಡ್ದವೆ. ಜೋರಾಗಿ ನಡ್ದ್ ಕದ್ರ್ ಜಾಸ್ತಿ ಅಲ್ಲಾಡಿರೆ ಬತ್ತ ಉದ್ರಿ ಬಿದ್ದೋದೆ. 'ವರ್ಷದ ಅನ್ನ' ಹೆಜ್ಜೆ ಹೆಜ್ಜೆಗೂ ಎಚ್ಚರ ಬೇಕ್‌ಂತ ಹಿರಿಯವು ಹೇಳಿವೆ. ಹಿಂಗೆ ಹೊತ್ತ್ ತಂದ ಹೊರೆನ ಕಳಲಿ ಮೆದೆ ಮಡ್ಗಿವೆ. ಮೆದೆ ಬುಡಂವ ಅನುಭವಿ ಆಗಿರೊಕು. ಬೆಳೆದ್ ಬುಡ ಒಳಗೆ ಹೊರಗೆ ಆಗದಂಗೆ ತಟ್ಟಿಕಂಡ್ ತಟ್ಟಿಕಂಡ್ ಮೆದೆ ಬುಟ್ಟದೆ. ಹಿಂಗೆ ಮೆದೆ ಬುಡಂವ ಮೆದೆ ಬುಟ್ಟದೆ. ಮೆದೆ ಎತ್ತರ ಎತ್ತರ ಆಗ್ತಾ ಇದ್ದಂಗೆ ಮೆದೆಗೆ ಏಣಿ ಇಸಿದ್ದವೆ. ಅಷ್ಟ್ ದೂರಂದ ಬೆಳೆ ಹೊತ್ತ್‌ಕಂಡ್ ಬಂದವ್ ಏಣಿದ್ ಮೆಟ್ಟ್ ಹತ್ತಿ ಮೆದೆ ಕೊಡಿಗೆ ಹೊರೆನ ಹಾಕೊಕು. ಗದ್ದೆಂದ ಇಲ್ಲಿಗಂಟ ಬಾಕನೇ ಸುಸ್ತು. ಅದ್ರೊಟ್ಟಿಗೆ ಏಣಿ ಹತ್ತುದುಂತೇಳಿರೆ? ಆ ಕಷ್ಟ ಅವುಕೇ ಗೊತ್ತು. ಹಿಂಗೆ ಮೆದೆ ಬುಡಂವ ಮೆದೆ ಬುಡನ ಅಗಲಕ್ಕೆ ಇಸಿಕಂಡ್ ಮೇಲೆ ಮೇಲೆ ಹೋತಿದ್ದಂಗೆ ಅಗಲ ಕಮ್ಮಿ ಮಾಡಿಕಂಡ್ ಮೆದೆ ಬುಟ್ಟದೆ. ಮೆದೆ ಎಲ್ಲಾ ಬುಟ್ಟ್ ಆದ ಮೇಲೆ ಕಡೆಲಿ ಹುಲ್ಲ್ ಕಂತೆನ ಹರಂಡಿವೆ. ಯಾಕೆಂತೇಳಿರೆ ಒಕ್ಲು ಮಾಡಿಕೆ ಮುಂದೆ ಮಳೆ ಬಂದರೆ ತೊಂದರೆ ಆಗದಿರ್‍ಲಿಂತ ಹುಲ್ಲ್ ಹಾಕಿವೆ. ಹಿಂಗೆ ನೂರು ಇನ್ನೂರು ಐನೂರು ಸಾವ್ರ ಬಟ್ಟಿ ಭೂಮಿ ಇರವು ಏಳೆಂಟ್ ಹತ್ತ್ ಅದ್ಕೈದ್ ಮೆದೆ ಮಾಡಿಕಂಡಿದ್ದವೆ. ಬೆಳೆ ಎಲ್ಲಾ ಕೊಯ್ದ್ ಹೊತ್ತ್ ಮೆದೆ ಬುಟ್ಟ್ ಒಂದ್ ಹತ್ತ್

ದಿನ ಕಳ್ದ ಮೇಲೆ ಒಕ್ಲು ಕೆಲ್ಸ ಸುರು ಮಾಡಿವೆ. ಈ ನಡುವೆ ಹೊರೆ ಕಟ್ಟಕನ, ಹೊರೆ ಹೊತ್ತ್‌ಕಂಡ್ ಬಾಕನ ಕದ್ರ್ ಬಿದ್ದ್ ಹೋಗಿದ್ದದೆ. ಹಂಗಾಗಿ ಕೆಲವ್ ಪಡ್ಡೆ ಮಕ್ಕ ಗದ್ದೆಲಿ ಕದ್ರ್ ಹೆರ್ಕ್ಯವ ಕೆಲ್ಸ ಮಾಡಿವೆ. ಮತ್ತೆ ಕೆಲವು ಎಲಿ ಮಾಳಿ ತೋಂಡಿವೆ. ಎಲಿ ಮಾಳಿನ ಎಳ್ಳಕನೇ ಗೊತ್ತು, ಒಂದೇ ಒಂದ್ ಜಳ್ಳ್ ಬತ್ತ ಇಲ್ಲದ ದುಡಾ ಬತ್ತನೇ ಎಲಿಗ ಮಾಳಿಯೊಳಗೆ ತುಂಬಿಕಂಡಿದ್ದವೆ. ಹಿಂಗೆ ಮಕ್ಕ ಎಲಿ ಮಾಳಿಂದ ಸಿಕ್ಕಿದ ಮತ್ತೆ ಬಿದ್ದ ಕದ್ರ್ ಹೆರ್ಕಿ ಮೂರ್‍ನಾಕ್ ಪರೆಯಷ್ಟ್ ಬತ್ತ ಸಂಪಾದನೆ ಮಾಡಿಕಂಬತಿದ್ದೊ.

ಒಕ್ಲು ಹಾಕಿಕೆ ಮುಂದೆ ಕಳಕ್ಕೆ ಸಗಣಿ ಗುಡ್ಸಿವೆ. ಸಗಣಿ ಗುಡ್ಸುದುಕೂ ಸಗಣಿ ಸಾರ್‌ಸುದುಕೂ ವ್ಯತ್ಯಾಸ ಉಟ್ಟು. ಮನೆನ ಸಾರ್‌ಸುದುತ ಹೇಳ್ರೆ ಕಳನ ಗುಡ್ಸುದುತ ಹೇಳಿವೆ. ಕಳ ಗುಡ್ಸಕನ ಸಗಣಿ ಸಾರ್ಸಿದ ಕುಕ್ಕೆ ಇಲ್ಲರೆ ದೊಡ್ಡ ಪಾತ್ರಲಿ ಸಗಣಿನ ಕಲ್ಸಿಕಂಡವೆ. ಹಂಗೆ ಕಲ್ಸಿಕಂಡ ಸಗಣಿ ನೀರ್‌ನ ಮೊರ ಇಲ್ಲರೆ ಗಂಜಿ ಪಾತ್ರೆಂದ ಕಳಕೆ ಚೆಲ್ಲಿವೆ. ಚೆಲ್ಲಿದ ಕೂಡ್ಲೆ ಅಂಗಳ ಗುಡ್ಸುವ ಚೀಪೆಂದ ಸಗಣಿ ನೀರ್‌ನ ಗುಡ್ಸಿವೆ. ಅದೊಂದು ಗಿಡ ಉಟ್ಟು. ಆ ಗಿಡನ ಚೀಪೆ ಗಿಡಂತೇ ಹೇಳ್ದು. ಆ ಗಿಡ ಹದಾ ಬೆಳ್ದ ಮೇಲೆ ಅದರ್‍ನ ಬುಡಾಂದ ಕಡ್ದ್ ಒಣಂಗಿಸಿವೆ. ಅದ್ ಒಣಂಗಿಕಂಡ್ ಬಾಕನ ಎತ್ತಿ ಬಡ್ದರೆ ಅದರ ಬೀಜ ಉದುರ್‌ದೆ. ಮತ್ತೆ ಅದರ ಅಳ್ತೆಗೆ ತಕ್ಕಂಗೆ ಹಿಡಿ ಕಟ್ಟಿವೆ. ಅಂಗಳ ಗುಡ್ಸಿಕೆ, ಕಳ ಗುಡ್ಸಿಕೆ ಒಕ್ಲು ಗುಡ್ಸಿಕೆಲ್ಲ ಅದ್ ಭಾರೀ ಲಾಯ್ಕಾದೆ. ಈಗ ಕೆಲವೆಲ್ಲ ತೆಂಗ್‌ನ ಗರಿದ್ ಕಡ್ಡಿನ ಗುಡ್ಸಿಕೆ ಉಪಯೋಗಿಸಿವೆ. ಎಷ್ಟೇ ಆದರೂ ಚೀಪೆ ಗಿಡದ ಚೀಪೆಯಷ್ಟ್ ಬಾಕಿದ್ದ ಚೀಪೆಗ ಲಾಯ್ಕಾದುಲೆ. ಮಾಯ್ಬಿಗೂ ಚೀಪೆಗೂ ವ್ಯತ್ಯಾಸ ಉಟ್ಟು. ಮನೆ ಗುಡ್ಸಿಕೆ ಉಪಯೋಗಿಸುದರ ಮಾಯ್ಬುಂತೇಳಿವೆ. ಅದ್ ಬೇಕಷ್ಟೇನೂ ಇರ್ದುಲೆ. ಮಾಯ್ಬು ಗಿಡನ ಹುಡ್ಕಿಕಂಡ್ ಬೆಟ್ಟದ ಕಡೆಗೆ ಹೋಕು. ಅದರ್‌ಲಿ ಎರಡ್ ಜಾತಿ ಗಿಡ ಉಟ್ಟು. ಸಣ್ಣ ಸಣ್ಣ ಗರಿ ಇರುವ ಗಿಡನೇ ಮನೆ ಗುಡ್ಸಿಕೆ ಬೇಕಾದ್ದ್. ಇನ್ನೊಂದ್ ಉಟ್ಟು. ಅದರ ಗರಿ ಹಂಞ ಅಗಲ. ಅದರ್‍ನ ಎಮ್ಮೆ ಮಾಯ್ಬು ಗಿಡಂತ ಹೇಳಿವೆ. ಈಗ ಸಂತೆಲೆಲ್ಲ ಸಿಕ್ಕುದು ಎಮ್ಮೆ ಮಾಯ್ಬುನೇ ಜಾಸ್ತಿ. ಮಾಯ್ಬು ಗಿಡದ ಹಣ್ಣ್‌ನ ತಿಂಬಕೆ ಬಾರಿ ಲಾಯ್ಕಾದೆ. ಸಿಂಹಿ ಇರುವ ಆ ಹಣ್ಣ್ ಖರ್ಜೂರ ತಿಂದಂಗಾದೆ. ಅದರ ಬೀಜನೂ ಸನ ಖರ್ಜೂರದ ಬೀಜದಂಗೇ ಇರ್ದು. ವಯಸ್ಸ್‌ಪಟ್ಟ ನೀವು

ತಿಂದಿರುವರಿ. ಆದರೆ ಇಂದ್‌ನ ಮಕ್ಕಳಿಗೆ ಗೊತ್ತಿರಿಕಿಲೆತ ಕಂಡದೆ.

ಅದೆಲ್ಲ ಇರ್‌ಲಿ, ಈ ಒಕ್ಕುಲು ಮಡ್‌ಗುವ ಕೆಲ್ಸ ಅನುಭವಿ ಕೆಲ್ಸಗಾರಂಗೇ ಸರಿ. ಒಬ್ಬ ಮೆದೆ ಮೇಲೆ ಹತ್ತಿಕಂಡ್ ಬೆಳೆನ ಬಾಚಿ ಒಂದ್ ಕ್ರಮಲಿ ನೆಲಕೆ ಹಾಕಿದೆ. ಅದ್ ನೆಲಕ್ಕೆ ಬೀಳಕನೇ ಸುಮಾರ್ ಬತ್ತ ಉದ್ರ್‌ದೆ. ಕೆಳಗೆ ಹಾಕಿದ ಬೆಳೆನ ಬೇಟಿ ಸುತ್ತ ನಿಲ್ಸಿವೆ. ನಾಕೈದ್ ಎತ್ತ್‌ಗ ಸುತ್ತುವಷ್ಟ್ ಅಗಲಲಿ ಒಕ್ಲು ಮಡಿಗಿವೆ. ಹಂಗೆ ಮಡ್ಗಿದ ಒಕ್ಲು ನೋಡಿಕೆ ಬಾರಿ ಲಾಯ್ಕ ಕಂಡದೆ. ಒಕ್ಲು ಮಡ್ಗಿ ಆದ ಮೇಲೆ ಉದ್ದದ ಸಪೂರ ವಾಟೆ ಜಳೆಂದ ಬೆಳೆಗೆ ಬಡ್ದವೆ. ಆ ಜಳೆನ ಒಕ್ಲು ಜಳೆಂತೇಳಿವೆ. ಹಂಗೆ ಬಡೆದರ್ನ ಒಕ್ಲು ಬಡೆದುತ ಹೇಳ್ದು. ಒಕ್ಲು ಬಡೆಕನ ಸೊಂಯಿಪ್ ಸೊಂಯಿಪ್‌ತೇಳುವ ಸದ್ದ್ ಎಷ್ಟೋ ದೂರಕೆ ಕೇಳ್ದೆ. ಸಾಮಾನ್ಯಾಗಿ ಇಬ್ಬರು ಒಕ್ಲು ಬಡ್ದವೆ. ಬಡ್ದೆಲ್ಲ ಆದ ಮೇಲೆ ತಂಪು ಹೊತ್ತ್‌ಲಿ ಎತ್ತ್‌ಗಳ ಒಕ್ಲು ಮೇಲೆ ನಿಲ್ಸಿ ಕುತ್ತಿಗೆಗೆ ದಳಿ ಹಾಕಿವೆ. ಇಲ್ಲರೆ ಕೊಂಬುಂದ ಕೊಂಬಿಗೆ ಹಗ್ಗನ ತೆಕ್ಕೆ ಹಾಕಿವೆ. ಎತ್ತ್‌ಗ ಎಳ್ಕಂಡ್ ಆಚೆ ಈಚೆ ಹೋಕಾದುಲೆ. ಹಂಗೆ ಕಟ್ಟಿದ ಮೇಲೆ ಎತ್ತ್‌ಗಳ ನಡ್ಸಿವೆ. ಹಂಗೆ ನಡ್ಸುದರ ಹೊಕ್ಲು ಹೊಡೆದುತ ಹೇಳಿವೆ. ಹಿಂಗೆ ಒಕ್ಲು ಹೊಡೆಕೆ ಸುರು ಮಾಡಿವೆ. ಒಬ್ಬಂಗೆ ಒಕ್ಲು ಹೊಡೆದೇ ಕೆಲ್ಸ. ಅಂದರೆ ಎತ್ತ್‌ಗಳ ಬೆನ್ನ್ ಮೇಲೆ ಕೋಲ್ ಆಡ್ಸಿಕಂಡ್ ಬೇಟಿ ಸುತ್ತ ಎತ್ತ್‌ಗಳ ಸುತ್ತಿಸಿದೆ. ಹಿಂಗೆ ಸುತ್ತಿಕಂಡ್ ಇರಕನ ಕೆಲವು ಸತಿ ಎತ್ತ್‌ಗ ಸಗಣಿ ಹಾಕಿಬುಟ್ಟವೆ. ಆಗ ಒಕ್ಲು ಹೊಡೆಂವ ಕೂಡ್ಲೆ ಅದರ ಗೊತ್ತು ಮಾಡಿಕಣೊಕು. ಎತ್ತ್ ಬಾಲ ಎತ್ತಕನ ಒಂದ್ ಹಿಡಿ ಹುಲ್ಲ್‌ನ ಹಿಡ್ಕಂಡ್ ಸಗಣಿ ನೆಲಕೆ ಬೀಳಕನ ಹಿಡ್ಕಣೊಕು. ಇಲ್ಲರೆ ಸಗಣಿ ಪೂರ ಮೆಟ್ಟಿ ಮಾಡಿ ಆಕನ ಬತ್ತಕೆ ಸೇರಿ ಹೋದೆ. ಎತ್ತ್‌ಗ ಅದೆಷ್ಟೋ ಸತಿ ಪ್ರದಕ್ಷಿಣ ನಡ್ದ ಮೇಲೆ ಮತ್ತೆ ಅಪ್ರದಕ್ಷಿಣೆಯಾಗಿ ಸುತ್ತುಸೊಕು. ಹಿಂಗೆ ಒಂದ್ ದಪ ಸುತ್ತಿ ಆದಂಗೆ ಕೊಕ್ಕೆಂದ ಹುಲ್ಲ್‌ನ ಕೊಡಿಕಿವೆ. ಸಾಮಾನ್ಯಾಗಿ ಪಡ್‌ಚಿ ಮರದ ಕೊಕ್ಕೆನ ಮಾಡ್ಕಂಡಿದ್ದವೆ. ಗೂಟ ಹೊಡ್ದ್ ಬಗ್ಗುವಂಗೆ ಮಾಡಿವೆ. ಆ ಕೊಕ್ಕೆನ ಒಕ್ಲು ಕೊಕ್ಕೆತೇಳಿವೆ. ಕೊಡ್ಕಿ ಆದ ಮೇಲೆ ಪುನಾ ಎತ್ತ್‌ಗಳ ಒಕ್ಲು ಮೇಲೆ ಹತ್ತಿಸಿ ನಡ್ಸಿವೆ. ಹಿಂಗೆ ಎತ್ತ್‌ಗ ಆಚೆ ಈಚೆ ನಡ್ದ್ ನಡ್ದ್ ಆಕನ ಬತ್ತ ಉದ್ರಿದ್ದದೆ. ಹುಲ್ಲ್ ಹದಾ ಆಗಿದ್ದದೆ. ಒಕ್ಲು ಹೊಡ್ದ್ ಆದ ಮೇಲೆ ಎತ್ತ್‌ಗಳಿಗೆ ನೀರ್ ಕೊಟ್ಟ್ ಹುಲ್ಲ್ ಹಾಕಿ ಕೊಟಗೆಲಿ ಕಟ್ಟಿವೆ. ಇಷ್ಟೆಲ್ಲ ಆಕನ ಈ ಪಡ್ಡೆ ಮಕ್ಕ

ಒಳಲ್ಲಾ ಅವು ಬೇಟಿ ಮೇಲೆ ಹತ್ತಿ ನಿತ್ತ್‌ಕಂಡ್ ಹುಲ್ಲ್ ಮೇಲೆ ಹಾರಿವೆ. ಲಾಗ ಹಾಕವ್ ಲಾಗ ಹಾಕಿವೆ. ತಲೆ ಕುತ್ತಿ ಮೊಗೆವು ತಲೆಕುತ್ತಿ ಮೊಗ್ದವೆ. "ಗುದ್ದು ಗುದ್ದುರೇ ಮಾಣಿಕ ಮಂಡ, ಕೈ ಕುತ್ತಿ ಕಂಬ" ತೇಳಿಕಂಡ್ ಕಾಲ್ ಎಳ್ದ್ ಬೀಳ್ಸಿಕಂಡ್ ನಗಾಡಿಕಂಡ್ ಆಟ ಆಡಿವೆ. ನಂಟ್ರ ಮಕ್ಕಳೊಟ್ಟಿಗೆ ಮನೆ ಮಕ್ಕಳ ಆಟ ಕೂಟ ನಗೆ ಅದೆಲ್ಲಾ ಸರಿ. ಪಾಪ, ಆಟೆಲ್ಲಾ ಆದ ಮೇಲೆ ಮಕ್ಕಳ ಕಾಲಿಗೆ ನೀರ್ ಬೀಳಕನೇ ಗೊತ್ತು! ಆ ಉರಿ ಯಾರಿಗೆ ಬೇಕ್? ನಗಾಡ್ದಂಗಲ್ಲ, ಮರ್ಟಂಗಲ್ಲ. ಹುಲ್ಲ್ ಕಾಲ್ ಮೈ ಕೈನೆಲ್ಲಾ ಕೊಯ್ದದೆತ ಸಿಟಿ ಮಕ್ಕಳಿಗೆ ಗೊತ್ತುಟಾ? ಹಿಂಗಿರಕನ ಗಂಡ್ ಜನ ಕೊಕ್ಕೆ ತಕಂಡ್ ಹುಲ್ಲ್‌ನ ಕೊಡ್ಕಿ ಕೊಡ್ಕಿ ದಂಡೆ ಹಾಕಿವೆ. ಒಂದೇ ಅಳ್ತೆಲಿ ದಂಡೆ ಹಾಕಿದ ಮೇಲೆ ಹುಲ್ಲ್‌ಕಂತೆ ಕಟ್ಟುವ ಕೆಲ್ಸ ಸುರಾದೆ. ಈ ಎಲ್ಲಾ ಕೆಲ್ಸ ಸಾಮಾನ್ಯಾಗಿ ತಿಂಗೊಳು ಬೆಳ್ಕ್‌ಲಿ ಮಾಡಿವೆ. ಯಾಗೋಳು ತಿಂಗೊಳು ಇರ್ದುಲೆ. ಆಗ ದೊಂದಿ ಹೊತ್ತಿಸಿಕಂಡ್ ಕೆಲ್ಸ ಮಾಡಿವೆ. ಆಗ ಏನಾರ್ "ಪೊಪ್ಪ ಪೊಪ್ಪ ಅಲ್ಲಿ ನೋಡು ನಕ್ಷತ್ರ ಓಡ್ದು"ತ ಹೇಳ್ರೆ ಮುಗ್ತ್‌ಕತೆ. ಬಯ್ಗುಳದೊಟ್ಟಿಗೆ ಪೆಟ್ಟೂ ಬಿದ್ದದೆ. ಯಾಕೆಂತೇಳ್ರೆ. ಉಲ್ಕಾಪಾತ ನೋಡ್ರೆ ಸಾಲಗಾರ ಆದವೆಗಡ. ಸಧ್ಯ ಮಕ್ಕ ಒಕ್ಲು ನೆಪಲಾರ್ ಇರ್ಲ್ ಆಕಾಶ ನೋಡ್ತಿದ್ದೊ. ಹುಲ್ಲು ಕಟ್ಟಿ ಆಗ್ತಾ ಇದ್ದಂಗೆ ಬೇಟಿ ಸುತ್ತ ಬೆದ್ರ್ ಮುಳ್ಳು ಚೀಪೆಲಿ ಗುಡ್ಸಿವೆ. ಆಗ ಹೊಡಿ ಹುಲ್ಲೆಲ್ಲಾ ಒಂದ್ ಕಡೆ ಬಂದದೆ. ಹಿಂಗೆ ಗುಡ್ಸಿ ಗೋರ್ ಮಣೆಂದ ಗೋರಿ ಗುಡ್ಡೆ ಮಾಡಿ ಬಾಕಿ ಇದ್ದರ ಕಾಲ್‌ಂದ ಗುಡ್ಡೆ ಮಾಡಿವೆ. ಮತ್ತೆ ಆ ಗುಡ್ಡೆ ಮೇಲೆ ಹುಲ್ಲ್ ಕಂತೆನ ಮುಚ್ಚಿವೆ. ಇಷ್ಟೆಲ್ಲಾ ಆಕನ ಇರ್ಲ್ ಹತ್ತನ್ನೊಂದ್ ಗಂಟೆ ಆದೆ. ಕೆಲವ್ ಕಡೆ ಹುಲ್ಲ್ ಕಂತೆಂದ ಗೂಡ್ ಮಾಡಿಕಂಡ್ ಒಬ್ಬನೋ ಇಬ್ಬರೋ ಅಲ್ಲೇ ಕಳಲೇ ಬತ್ತಕ್ಕೆ ಪಾರ ಮಲ್ಗಿವೆ.

ಮಾರ್ನೆಗೆ ಬತ್ತ ಪಾತುವ ಕೆಲ್ಸ ಮಾಡಿವೆ. ಒಬ್ಬ ಈ ಕಡೆಂದ ಬೇಟಿದ್ ಆಚೆಗೆ ಕುಂಞಿ ಮೊರಲಿ ಬತ್ತ ತಕ್ಕಂಡ್ ಬೀಸಿ ಹಾಕಿದೆ. ಹಂಗೆ ಹಾಕುದರ ಬತ್ತ ಪಾತುದುತ್ತೇಳ್ದು. ಅರ್ಧ ಚಂದ್ರಾಕಾರಲಿ ಬತ್ತ ಬಿದ್ದದೆ. ಧೂಳು, ಜಳ್ಳ್, ಅರೆಚಟ್, ದುಡು ದುಡಾದ ಬತ್ತ ಬೇರೆ ಬೇರೆ ಆಗಿ ಬಿದ್ದದೆ. ಹಿಂಗೆ ಬಿದ್ದ ಮೇಲೆ ಉದ್ದ ಮೊರಂದ ಜೋರಾಗಿ ಬೀಸಿವೆ. ಆಗ ಆ ಗಾಳಿಗೆ ಜಳ್ಳ್, ಧೂಳು, ಅರೆಚೆಟ್ಟೆಲ್ಲಾ ದೂರ ಹಾರ್ದೆ. ಅರೆಚೆಟ್ಟ್‌ಂತೇಳ್ರೆ ಅರ್ಧಂಬರ್ದ ಬೆಳ್ದ ಬತ್ತಂತ ಅರ್ಥ. ಒಂದ್

ಮ್ಯೆ ಬತ್ತನ ಒಣಂಗಿಸಿ ದೇವುರ್‌ನ ಗ್ಯಾನ ಮಾಡಿ ಪೊಲಿ ಪೊಲಿಂತೇಳಿಕಂಡ್ ಕಡಿಕೆಗೆ ತುಂಬುಸುವೆ. ಕೆಲವ್ ಮನೆಗಳ್‌ಲಿ ಬತ್ತಕ್ಕೆ ಶೀತ ಹತ್ತದಿರ್ಲಿ‌ಂತ ಕಡಿಕೆನ ಅಟ್ಟಲಿ ಕಟ್ಟಿದ್ದವೆ. ಮತ್ತೆ ಕೆಲವ್ ಮನೆಗಳ್‌ಲಿ ಪತ್ತಾಯ ಮಾಡಿ ಅದರ್‌ಲಿ ಬತ್ತನ ತುಂಬುಸುವೆ. ಈಗ ಚೀಲಗಳ್ಲಿ ತುಂಬಿ ಬಾಯಿ ಕಟ್ಟಿ ಒಂದರ ಮೇಲೊಂದ್ ಇಸಿವೆ.

ಒಕ್ಲು ಆದರೂ ಕಳಲಿ ಕೆಲ್ಸ ಬಾಕಿ ಇದ್ದದೆ. ಹೊಡಿ ಹುಲ್ಲೊಟ್ಟಿಗೆ ಬತ್ತನೂ ಇದ್ದದೆ. ಅದರ ಬೇರೆ ಬೇರೆ ಮಾಡೊಕು. ಆ ಕೆಲ್ಸನ ಉಕ್ಕುಡೆ ಪಾತುದುಂತೇಳಿವೆ. ಆ ಕೆಲ್ಸನ ಜಾಸ್ತಿ ಹೆಣ್ಮಕ್ಕಳೇ ಮಾಡ್ತು. ಅದರ್ಲೂ ಅಜ್ಜಿಕ ಇದ್ದರೆ ಅವು ಸುಮ್ಮನಿರ್ದುಲೆ. ತಲೆಗೆ ಬಟ್ಟೆ ಕಟ್ಟಿಕಂಡ್ ಗಾಳಿ ಬೀಸುವ ದಿಕ್ಕ್‌ನ ನೋಡಿ ಮೊರಲಿ ಹುಲ್ಲ್ ಹೊಡಿನ ತಕ್ಕಂಡ್ ತನ್ನ ತಲೆ ಎತ್ತರಂದ ಮೊರ್‌ನ ವಾರೆ ಮಾಡಿ ಅಲ್ಲಾಡ್ಸಿರೆ ಧೂಳು, ಜಳ್ಳ್, ಮಣ್ಣ್ ಉಂಡೆಲ್ಲಾ ಬೇರೆ ಬೇರೆ ಆದೆ. ಆ ಕೆಲ್ಸಕೆ ಜೋರು ಗಾಳಿ ಬೇಕೆ ಬೇಕು. ಗಾಳಿ ಬೀಸದಿದ್ದರೆ ಪಡ್ಜೋರೆ ಸೀಪ್ಲು ಹಾಕಿದೆ ನೋಡಿ ಹಂಗೆ ಸೀಪ್ಲು ಹಾಕೊಕು. ಸೀಪ್ಲುಂತೇಳಿರೆ ವಿಶಲ್‌ತ ಅರ್ಥ. ಗಾಳಿ ಬೀಸಿತೋ ಇಲ್ಲೆಯೋ ಬುಡಿ. ಹಿಂಗೆ ಮಾಡಿ ಆದ ಮೇಲೆ ಆ ಬತ್ತನ ಕೋಳಿಗಳಿಗೇಂತ ಬೇರೆ ತುಂಬಿಕಂಡ್ ಇಸಿದ್ದವೆ. ಮತ್ತೆ ಪುರ್ಸೊತ್ ಮಾಡಿಕಂಡ್ ಹುಲ್ಲ್‌ಮುಂಡ ಮೆಟ್ಟಿವೆ.

ಹುಲ್ಲ್ ಮುಂಡ ಮೆಟ್ಟುದು ಸುಲಭದ ಕೆಲ್ಸ ಮನಿ ಅಲ್ಲ. ಅದ್ಕೂ ಅನುಭವ ಬೇಕ್. ಇಲ್ಲರೆ ಹುಲ್ಲ್ ಕಂತೆನ ಮೆಟ್ಟಿಕಂಡ್ ಎತ್ತರಕೆ ಹೋದಂಗೆ ಮೊಗ್‌ಚಿ ಬಿದ್ದದೆ. ಹುಲ್ಲ್ ಮೆಟ್ಟಕನ ಬುಡ ಕಡೆ ಅಗಾಲ ಇಸಿವೆ. ಕೊಡಿ ಕೊಡಿಗೆ ಹೋದಂಗೆ ಅಗಲ ಕಮ್ಮಿ ಕಮ್ಮಿ ಆಗಿ ಕೂಡಿಕಂಡದೆ. ಹುಲ್ಲ್ ಇದ್ದಷ್ಟ್ ಹುಲ್ಲ್ ಮುಂಡ ದೊಡ್ಡದ್ ಇದ್ದದೆ. ಒಂದ್ ಹುಲ್ಲ್ ಮುಂಡ ಕಳಲಿ ಉಟ್ಟುತಾದರೆ ಅದರ್‌ಂದ ನೂರಾರ್ ಉಪಕಾರ ಉಟ್ಟು.

ಮಕ್ಕ ಮನೆಲಿ ಒಳೋತಾದರೆ ಹುಲ್ಲ್ ಮುಂಡ ಸುತ್ತ ಕಳ್ಳ ಪೋಲೀಸ್ ಆಟ ಆಡಿವೆ. ಬೆಳ್ದ ರಾಮಫಲ ಕಾಯಿನ ಕೊಯ್ದ್ ಹಣ್ಣಾಕೆ ಹುಲ್ಲೊಳಗೆ ನುಗ್ಗಿಸಿದ್ದವೆ. ಅದ್ ಕುಪ್ಪಣ್ಣ್ ಆತೋ ಇಲ್ಲೆಯೋ ಅದರ ಮಾಯ ಮಾಡಿಬುಟ್ಟವೆ. ಕುಪ್ಪಣ್ಣ್‌ಂತೇಳಿರೆ ಇನ್ನೇನ್ ಒಂದೆರ್ಡ್ ದಿನಲಿ ಹಣ್ಣಾಗುವ ಸ್ಥಿತಿಇರುವ ಹಣ್ಣ್‌ತ ಅರ್ಥ. ಹಲ್ಸ್‌ನ ಹಣ್ಣ್ ಕುಪ್ಪಣ್ಣಾಗಿದ್ದರೆ ಆಗ ಅದರ ರುಚಿನೇ ಬೇರೆ. ಗೋವ್ ಮಾನ ಹಣ್ಣ್ ಅಷ್ಟೇ. ಕುಪ್ಪಣ್ಣಾಕನ ಅದರ್‌ನ ಕೀಸಿ ತಿಂದರೆ ವ್ಹಾ ಅದೆಂತ ರುಚಿ

ಅಲಾ? ಕಿತ್ತುಳಿನ ಕೊಯ್ದ್ ಹುಲ್ಲ್ ಮುಂಡಲಿ ಅಮ್‌ಸಿ ಇಸ್‌ತಿದ್ದೊ. ಕಿತ್ತುಳಿ ಚುರ್‌ಂಗಿ ನೀರ್ ಆರ್ದ ಮೇಲೆ ತಿಂಬಕೆ ಬಾರೀ ರುಚಿ ಇದ್ದದೆ. ಮಕ್ಕ ಹಿಂಗೆ ಹಣ್ಣ್‌ಗಳ್ನ, ಬಟ್ಟೆದೋ ರಬ್ಬರ್‌ದೋ ಚೆಂಡ್‌ಗಳ್ನ ಮತ್ತೆ ಚಿಣ್ಣಿದಾಂಡ್‌ನೆಲ್ಲಾ ಅಮ್‌ಸ್‌ತಿದ್ದ ಜಾಗ ಹುಲ್ಲ್ ಮುಂಡನೇ ಆಗಿತ್ತ್.

ಮಕ್ಕ ಹಿಂಗೆ ಹುಲ್ಲ್‌ಮುಂಡಂದ ಉಪಕಾರ ಪಡ್ಕಂಡ್ರೆ ದೊಡ್ಡವ್ ಇನ್ನೊಂದ್ ರೀತಿಲಿ ಉಪಕಾರ ಪಡ್ಕಂಬತಿದ್ದೊ. ಹಿಂದೆಲ್ಲಾ ಹಳ್ಳಿಗಳ್‌ಲಿ ನಾಡ್ ಸಾರಾಯಿ ಬೇಕಷ್ಟ್ ಇರ್ತಿತ್ತ್. ಅದರ್ನ 'ಎನ್.ಎಸ್'ತ ಹೇಳ್ತಿದ್ದೊ. ಆ ಎನ್ನೆಸ್ ಕುಪ್ಪಿಗಳ್ನ ಹುಲ್ಲೊಳಗೆ ಇಸಿರೆ ಯಾರಿಗೂ ಗೊತ್ತಾಕಿಲೆ. ಯಾರಾರ್ ಬಂದ್ ಕಳ್ಳ್ ಕುಪ್ಪಿ ಹುಡ್ಕಿರೆ ಹುಲ್ಲ್ ಮುಂಡಲಿ ಉಟ್ಟುಂತ ಹೇಳ್ಬೇಡಿ ಮಕ್ಕಳೇಂತ ದೊಡ್ಡವ್ ಹೇಳಿ ಹೋತಿದ್ದೊ. ಆಗ ಏನಾರ್ ಕಳ್ಳ್ ಹಿಡೆಕೆ ಮನಿ ಪೊಲೀಸ್‌ಗ ಬಂದರೆ ಹುಲ್ಲ್ ಮುಂಡಲಿ ಮಾತ್ರ ಕಳ್ಳ್ ಕುಪ್ಪಿ ಇಲ್ಲೇಲೆಂತ ಮಕ್ಕ ಹೇಳ್ತಿದ್ದೊ. ಪೊಲೀಸ್‌ಗಳಿಗೆ ಸುಲಾಭಲಿ ಕಳ್ಳ್‌ಕುಪ್ಪಿ ಸಿಕ್ಕಿ ಹೋತಿತ್. ಮನೆಲಿ ದೊಡ್ಡವ್ ಇಲ್ಲದರ್‌ಂದ ಪೊಲೀಸ್‌ನವುಕೆ ಕುಪ್ಪಿ ಸಿಕ್ಕಿದೇ ಲಾಭ ಆತಿತ್. ಇನ್ನ್ ಈ ಕಳ್ಳ ದನಗಳಿಗೂ ಹುಲ್ಲ್ ಮುಂಡ ಆಶ್ರಯ ಕೊಟ್ಟದೆ. ಸುತ್ತಮುತ್ತ ಎಷ್ಟೇ ಹುಲ್ಲು ಇದ್ದರೂ ಕದ್ದ್ ತಿಂದರೇ ರುಚಿ ಜಾಸ್ತಿತೇಳುವಂಗೆ ಹುಲ್ಲ್ ಮುಂಡಕೆ ದನಗ ಬಂದ್‌ಬುಟ್ಟವೆ. ಈಗೀಗ ಆನೆಗಳೂ ಬಾದುಟ್ಟು. ಇನ್ನ್ ಕೋಳಿಗಳೋ ಹುಲ್ಲ್ ಮುಂಡದ ಮೇಲೆ ಹತ್ತಿಕಂಡ್ ಕೇರಿ ಕೇರಿ ಹುಲ್ಲ್‌ನ ಪೂರಾ ಚಿಕ್ಕ್ ಚಿಕ್ಕ್ ಮಾಡಿಬುಟ್ಟವೆ. ಹುಲ್ಲ್‌ಂದ ಉಪಕಾರ ಅಷ್ಟಿಷ್ಟಲ್ಲ. ಕಾಗದ ಮಾಡಿಕೆ, ಪಾರ್ಸಲ್ ಪ್ಯಾಕ್ ಮಾಡಿಕೆ, ಶುಂಠಿ ಪಟ ಮುಚ್ಚಿಕೆ, ಗಾರೆ ಮುಚ್ಚಿಕೆ, ಹಾಸಿಗೆ ಮಾಡಿಕೆ, ಅಳುಂಬು ಬೆಳೆಕೆ ಹುಲ್ಲ್ ಬೇಕ್.

ಮಳೆಗಾಲಲಿ ದನಗಳಿಗೆ ಬುಳುಗುಲ್ಲು ಬೇಕೇ ಬೇಕಾದೆ. ಬತ್ತದ ಹುಲ್ಲ್‌ನ ಬುಳುಗುಲ್ಲುಂತ ಹೇಳ್ದು. ಹಿಂದೆಲ್ಲಾ ಹುಲ್ಲ್‌ನ ಮನೆಗಳೇ ಜಾಸ್ತಿ ಇದ್ದದ್ ನೋಡಿ. ಹಂಗಾಗಿ ವರ್ಷಕ್ಕೆ ಒಮ್ಮೆ, ಇಲ್ಲರೆ ಎರ್ಡ್ ಮೂರು ವರ್ಷಕ್ಕೆ ಒಮ್ಮೆಯಾರೂ ಮನೆಗೆ ಹುಲ್ಲ್ ಹೋಸ್‌ತಿದ್ದೊ. ಮನೆದ್ ಹುಲ್ಲು ಕುಂಬಾಗಿದ್ದರೆ ಇಡೀ ಮಾಡ್‌ನ ಜಾರ್ಸಿ ಹೊಸಾ ಹುಲ್ಲ್‌ನ ಹೋಸಿವೆ. ಮಾಡ್‌ನ ಜಾರ್ಸಿದಂದ್ ಹಂಞ ಕೆಲ್ಸ ಜಾಸ್ತಿ ಇದ್ದದೆ. ಇಡೀ ಮನೆನ ಕರಿ ಹೊಡ್ದ್ ಗುಡ್ಸಿ ಹುಲ್ಲ್ ಹೋಸಿ ಆಕನ ಸಾಕ್ ಬೇಕಾದೆ. ಮನೆಗೆ ಹುಲ್ಲ್ ಹೋಸಿಕೆ ಎಲ್ಲವ್‌ಕೇನೂ ಗೊತ್ತಿರ್ದುಲೆ. ಮನೆ

ಮಾಡ್ ಚಾರೆ ಇರಕನ ಜಾರಿ ಬೀಳದಂಗೆ ಕುದ್ದ್‌ಕಣೊಕು. ಕೆಳಗೆಂದ ಹುಲ್ಲ್ ಕಂತೆನ ಬಿಸಾಕಕನ ಹಿಡ್ಕೊಣೊಕು. ಕೆಲವು ಸತಿ ಮಾಡ್‌ಗೆ ಹುಲ್ಲ್‌ಕಂತೆನ ಬಿಸಾಕಿಕೆ ಆಗದಿದ್ದರೆ ಉದ್ದ ಜಳಗೆ ಸೆಕ್ಕಿಸಿ ಮಾಡ್‌ಗೆ ಕೊಟ್ಟವೆ. ಹುಲ್ಲು ಹೋಸಂವ ಸೂರ್ ಕರೆಂದ ಹುಲ್ಲ್‌ನ ಹೋಸಿಕಂಡ್ ಮೇಲೆ ಮೇಲೆ ಹೋದೆ. ಇಡೀ ಮನೆಗೆ ಹುಲ್ಲ್ ಹೋಸಿ ಆದ ಮೇಲೆ ಮೋಂದಾಯ ಕೊಡಿಂದ ತೆಂಗ್‌ನ ಕಾಯಿನ ಒಡ್ಡ್ ಆ ಕಡೆಗೆ ಒಂದ್ ಗಡಿನ ಈ ಕಡೆಗೆ ಇನ್ನೊಂದ್ ಗಡಿನ ಉರ್‌ಂಡಿಸಿದೆ. ಮೋಂದಾಯಂತೇಳಿರೆ ಮನೆದ್ ನಡೂ ಭಾಗ. ಅದರ್ನ ಮನೆದ್ ನೆತ್ತಿಂತ ಸನ ಹೇಳಿವೆ. ಸರಿ, ಕಾಯಿ ಒಡ್ಡೋಂತೇಳ್ದಲ್ಲ, ಆ ಕಾಯಿ ಗಡಿ ಅಂಗಾತ ಬಿದ್ದರೆ ಭಾರೀ ಒಳ್ಳೆದ್‌ಗಡ. ಸರಿ, ಹುಲ್ಲ್ ಹೋಸಂವ ಮೆಲ್ಲ ಮಾಡ್‌ಂದ ಇಳ್ದದೆ. ಅಂವ ಇಳ್ದ ಮೇಲೆ ಕಾಯಿನ ಹೋಳು ಮಾಡಿ ಅಲ್ಲಿದ್ದ ಎಲ್ಲವುಕೆ ಹಂಚಿವೆ. ಬೆಲ್ಲನೂ ಕಾಯಿನೂ ಕೂಡ್ಸಿ ತಿಂದವೆ. ಬಾಯಿ ಚಪ್ಪಿಕಂಡ್ ಸೂರ್‌ದ್ ಹುಲ್ಲುನ ಸಮಾ ಮಟ್ಟಲಿ ಕೊಯ್ದವೆ. ಹಿಂಗೆ ಸೂರ್‌ದ್ ಹುಲ್ಲುನ ಕೊಯ್ದ್, ಮನೆನೆಲ್ಲಾ ಗುಡ್ಸಿ, ಅಂಗಳಲಿದ್ದ ಹೊಡಿ ಹುಲ್ಲ್‌ನೆಲ್ಲಾ ಗುಡ್ಡೆ ಮಾಡಿ ಗುಡ್ಸಿವೆ. ಹುಲ್ಲ್ ಹೋಸಿದ ಮೇಲೆ ಮನೆನ ದೂರಂದ ನೋಡಿಕೆ ಭಾರೀ ಲಾಯ್ಕ ಕಂಡದೆ. ಬಂಗಾರದ ಹೊದಿಕೆನ ಹೋಸಿದಂಗೆ ಕಾಂಬೊದು. ಹೊಸಾ ಮನೆ ಕಟ್ಟಿದಷ್ಟ್ ಖುಷಿ ಆದೆ. ಮಳೆಗಾಲಲಿ ಸೂರ್‌ಂದ ನೀರ್ ಸೊರೆಕನ ಮಕ್ಕ ಆಟ ಆಡ್ತಿದ್ದೊ. ಹೊಗೆ ಹಿಡ್ದ ಮನೆಯಾದರೆ ಸೂರ್‌ದ್ ನೀರ್ ಹೊಗೆ ನೀರಾಗಿ ಕಣ್ಣ ಚಾಯದ ನೀರಂಗೆ ಸೊರ್ದದೆ.

ಹುಲ್ಲ್ ಮನೆ ಬದ್‌ಕ್ ಸುಕದ ಬದ್ಕ್. ಮಳೆಗಾಲಲಿ ಮಳೆ ಹನಿ ಬೀಳುವ ಸದ್ದೂ ಕೇಳ್ದುಲೆ. ಮನೆ ಸೋರ್ದೂ ಇಲ್ಲೆ. ಚಳಿಗಾಲಲಿ ಬೆಚ್ಚಂಗಿದ್ದದೆ. ಬೇಸಿಗೆಲಿ ತಂಪಾಗಿದ್ದದೆ. ಕೆಲವ್ ಹೇಳ್ವಂಗೆ ಈ ಹುಲ್ಲ್‌ದ್ ಮನೆ ಮುಂದೆ ಆರ್.ಸಿ.ಸಿ. ಮನೆಯಾಗಲಿ, ಹಂಚಿದ್ ಮನೆಯಾಗಲಿ, ಶೀಟ್‌ದ್ ಮನೆಯಾಗಲಿ ಯಾಕೆ ಬೇಕು? ಆದರೆ ಕಾಡ್ಗಿಚ್ಚ್ ಕಾಲಲಿ ಮಾತ್ರ ಎಚ್ಚರ ಬೇಕ್.

ಹಿಂಗೆ ಗದ್ದೆ, ಬತ್ತದ ಬೆಳೆ, ಹುಲ್ಲು, ಕೊಟಗೆ, ಮನೆ ಒಂದಕ್ಕೊಂದ್ ಸಂಬಂಧ ಉಟ್ಟೇ ಉಟ್ಟು. ಅಂದ್ ಕರ್ಚ್ ಕಮ್ಮಿ ಇತ್ತ್. ಭಾರೀ ಸುಕ ಇತ್ತ್‌ತೇನಲ್ಲ. ಅದ್ ಅಂದ್‌ದ್ ಸ್ಥಿತಿ. ಇಂದ್ ಹಿಂಗೆ ಒಳೊ.

* * * * *

# ಹುಲ್ಲುದ್ ಮನೆ ಎಲ್ಲಿ ಹೋತು?

ಹತ್ತೈವತ್ತ್ ವರ್ಷಗಳ ಹಿಂದೆಲ್ಲಾ ಊರೊಳಗೆ ಇದ್ದದ್ ಜಾಸ್ತಿ ಹುಲ್ಲ್‌ದ್ ಮನೆಗಳೇ, ಎಲ್ಲೋ ಅಲ್ಲೊಂದ್ ಇಲ್ಲೊಂದ್ ಹಂಚಿನ ಮನೆಯವ್ ಇದ್ದರೆ ಅಂಥಾ ಮನೆಯವ್ ಭಾರೀ ಶ್ರೀಮಂತರ್‌ತ ಹೇಳ್ತಿದ್ದೊ. ನೀವ್ ಯಾರ ಮನೆಯವುತ ಕೇಳ್ರೆ 'ನಾವ್ ಹಂಚಿ ಹಾಕಿದ ಮನೆಯವು'ತ ತಮಾಷೆಗೂ ಆತ್ ಕಾರ್ಯಕೂ ಆತ್‌ತ ಹೇಳ್ತಿದ್ದ ಕಾಲ ಅದ್. ಗೋಡೆ ಕಟ್ಟಿ, ಕೌಕೋಲು ಹಾಕಿ, ಬಾರಿ ಪಟ್ಟಿ ಹೊಡ್ದ್, ಹಂಚಿ ಕೋಸಿ ಬಿಟ್ಟ ಹಾಕಿ ಪಾರ್ ಹೊಡ್ದರೆ ಆ ಮನೆನ ಮಚ್ಚ್‌ಪಾರ್ದ್ ಹಂಚಿ ಮನೆತ ಹೇಳ್ತಿದ್ದೊ. ಆ ಮನೆಯವುಕೆ ಸಿಕ್ಕ್‌ತಿದ್ದ ಗೌರವನೇ ಬೇರೆ ಇರ್ತಿತ್.

ಇನ್ನ್ ಹುಲ್ಲ್‌ದ್ ನೆರಿಕೆ ಮನೆ ಹೆಂಗಿರ್ತಿತ್? ಸಾವ್ರ ರೂಪಾಯಿ ಒಳಗೆ ಒಂದ್ ಮನೆ ಆತಿತ್. ಮರದ ಕಂಬ ಹಾಕಿ, ಮೋಂದಾಯಕೆ ಬೆದ್ರ್‌ಗಳ ಸಿಕ್ಕಿಸಿ ಕಂಬದ ಮೇಲೆನ ಮರಕ್ಕೆ ಅಡ್ಡ ಗಳುನ ಕೂರುಸ್ತಿದ್ದೊ. ಅಂಜರ (ರೀಪರ್) ಕಟ್ಟಿ ಹುಲ್ಲ್ ಹೋಸ್ತಿದ್ದೊ. ಉಂಡೆ ಮರನ ಬಿಟ್ಟದಂಗೆ ಹಾಕಿ ಚೆದಲೆನ ಹಾಸ್ತಿದ್ದೊ. ಅಟ್ಟ ಆದಂಗೂ ಆತ್, ಕಸ ಬೀಳದಂಗೂ ಆತ್. ನೋಡಿಕೂ ಲಾಯ್ಕ ಇರ್ತಿತ್.

ಮೋಂದಾಯಂತೇಳ್ರೆ ನೀವ್ಗೂ ಗೊತ್ತುಟು. ಅದರ್‌ನ ಮನೆದ್ ನೆತ್ತಿತ ಹೇಳಿವೆ. ಬೆದ್ರ್‌ನ ಮೂರ್‍ನಾಕ್ ಬೆರಳ್ ಅಗಲಕೆ ಒಡ್ದ್ ಪಟ್ಟಿ ಮಾಡಿ ಗಳುದ್ ಅಡ್ಡಕ್ಕೆ ಕೂರ್‍ಸಿ ಕಟ್ಟ್‌ತಿದ್ದೊ. ಈಗ ರೀಪರ್‌ತ ಆಣಿ ಹೊಡ್ದವೆ. ಹಿಂಗೆ ಗಳುನ ಕೂರ್‍ಸಿ ಅಂಜರ ಕಟ್ಟಿರೆ ಮಾಡ್ ಆದಂಗೆ. ಮಾಡ್‌ದ್ ಸುತ್ತ ಸೂರ್‌ಗೆ ಕಟ್ಟುವ ಅಂಜರ ಕಟ್ಟ್‌ನ 'ಭೀಮಕಟ್ಟ್'ತ ಹೇಳಿವೆ. ಕೆಲವ್ ಕಾಡ್‌ಂದ ನಾರ್ ತಂದ್ ಕಟ್ಟಿರೆ ಮತ್ತೆ ಕೆಲವ್ ಅಗ್ಗಿಂದ ಚೂಡಿ ಹಗ್ಗ ತಾತಿದ್ದೊ. ಚೂಡಿ ಹಗ್ಗಂತೇಳಿರೆ ತೆಂಗ್‌ನ ನಾರ್‌ದ್ ಹಗ್ಗ. ಸೂರ್ ಕರೆಲಿರುವ ಅಂಜರನ ಮಾತ್ರ ಕತ್ರಿ ಗಂಟ್ ಹಾಕಿ

ಕಟ್ಟ್‌ತಿದ್ದೊ. ಆ ರೀತಿ ಭೀಮಗಂಟ್ ಹಾಕಿ ಕಟ್ಟಿರೆ ಮನೆಗೆ ಕಾಡಾನೆಗ ಬಾದುಲೆಗಡ. ಸೂರ್‌ಗೆ ಕಟ್ಟಿದ ಭೀಮ ಗಂಟ್‌ನ ನೋಡಿ 'ಓಹೋ ಈ ಮನೆಲಿ ಭೀಮ ವಾಸ ಮಾಡ್ತಾ ಉಟ್ಟು. ಇವರ ಒಟ್ಟಿಗೆ ನಮ್ಮ ಆಟ ನಡೆಕಿಲ್ಲೆ'ತ ಆನೆಗ ಹೆದ್ರಿ ಹಿಂದೆ ಹೋತಿದ್ದೊಗಡ. ಆನೆಗ ಬಾತಿದ್ದೊನೊ, ಭೀಮ ಗಂಟ್‌ನ ನೋಡ್ತಿದ್ದೊನೊ ಓಡ್‌ತಿದ್ದೊನೊ, ಯಾರ್ ನೋಡ್ದವ್ ಒಳೊ ಹೇಳಿ? ಅದೇನಾರ್ ಇರ್‌ಲಿ, ಅಂತೂ 'ಕತ್ರಿ' ಗಂಟ್ ಹಾಕಿ ಅಂಜರ ಕಟ್ಟ್‌ತಿದ್ದದಂತೂ ಹೌದು.

ನೆರಿಕೆ ಮನೆಗೂ ಗೋಡೆ ಮನೆಗೂ ವ್ಯತ್ಯಾಸ ಉಟ್ಟು. ಗೋಡೆ ಮನೆಯಾದರೆ ಸುರೂಗೆ ಗೋಡೆ ಕಟ್ಟಿ ಮತ್ತೆ ಮಾಡ್‌ದ್ ಕೆಲ್ಸ. ಆದರೆ ನೆರಿಕೆ ಮನೆ ಹಂಗೆ ಅಲ್ಲ. ಸುರೂಗೆ ಮಾಡ್ ಮಾಡಿ ಮತ್ತೆ ನೆರಿಕೆ ಮಾಡ್ದು. ನೆರಿಕೆಂತೇಳ್ರೆ ಬೆದ್ರ್‌ನ ಒಡ್ದ್ ಪಟ್ಟಿ ಮಾಡಿ ಕೀಸಿ ಒಳಗೆ ಹೊರಗೆ ಚುರ್ದ್ ಗೋಡೆನಂಗೆ ನಿಲ್ಸುದು. ಮನೆ ಸುತ್ತ ನೆರಿಕೆನ ನಿಲ್ಸಿ ಮತ್ತೆ ಕೋಂಬರೆ ಕೋಂಬರೆಗೂ ನಿಲ್ಸಿ ಆದ ಮೇಲೆ ಮಣ್ಣ್ ಮೆತ್ತುದು. ಕಿಡ್ಕೆ ಕಂಡಿ ಬೇಕ್‌ಂತಾದರೆ ಅಷ್ಟಗಲಕೆ ಮಣ್ಣ್ ಮೆತ್ತುದುಲೆ. ಸಣ್ಣ ಸೆರೆ ಇದ್ದರೆ ಅದೇ ಕಿಡ್ಕೆ. ಗಾಳಿ ಬೆಳ್ಕ್ ಜಾಸ್ತಿ ಬಾಕೆ ಅವಕಾಶ ಇರ್ದುಲೆ. ಮನೆ ಒಳಗೆಂದ ಸಣ್ಣ ಕಂಡಿಲಿ ನೋಡಕ್. ಆದರೆ ಹೊರಗೆನವುಕೆ ಕಾಂಬಲೆ. ಹಿಂಗೆ ನೆರಿಕೆ ಮಾಡಿ ನಿಲ್ಸಿ ಮಣ್ಣ್ ಮೆತ್ತಿ ಸಗ್‌ಣಿ ಸಾರ್ಸಿರೆ ನೋಡಿಕೆ ಗೋಡೆ ಮನೆನಂಗೆ ಕಾಂಬೊದು. ಮತ್ತೆ ಆ ಮನೆಗೆ ಬಾಗ್ಲ್ ಎರ್ಡೇ ಎರ್‌ಡ್. ಮೂಡಕೆ ಒಂದ್ ಬಾಗ್ಲ್. ಪಡುವಕೆ ಮತ್ತೊಂದ್ ಬಾಗ್ಲ್. ಬಾಗ್ಲ್ ಎಂತರ್ದ್? ಅದೂ ಸನ ಬೆದ್ರ್‌ದೆ. ಹಸಿ ಬೆದ್ರ್‌ನ ಸಣ್ಣದಾಗಿ ಬೆರಳ್ ಬೆರಳಾಗಿ ಒಡೆಯೊಕು. ಅದೇ ಚದಲೆ. ಅಟ್ಟಕೂ ಚದಲೆ, ಕಟ್ಲ್‌ಗೂ ಚದಲೆ ಬಾಗ್ಲ್‌ಗೂ ಚದಲೆ. ಎರಡ್ ಉಂಡೆ ಬೆದ್ರ್‌ನ ಅಳ್ತೆಗೆ ತಕ್ಕಂಗೆ ಕೊಡಿಂದ ಅಡಿ ಮುಟ್ಟ ತೂತ ಮಾಡಿ ಚೆದಲೆನ ಚುರ್ದ್ ಬೆದ್ರ್‌ನ ಎತ್ತರಕೆ ನಿಲ್ಸಿರೆ ಅದೇ ಬಾಗ್ಲ್. ಹಾಕುದು ತೆಗೆದು ಸುಲಾಭ ಆಗಲೀಂತ ಬೆದ್ರ್ ಕಾಲ್‌ನ ಚಿಪ್ಪಿ ಒಳಗೆ ಕೂರ್‌ಸ್‌ತ್ತಿದ್ದೊ. ಬಾಗ್‌ಲ್‌ಗೆ ತಾಳನೂ ಇಲ್ಲೆ, ಚಿಲ್ಕನೂ ಇಲ್ಲೆ. ಬಾಗ್‌ಲಿಗೆ ಬೀಗ ಹಾಕ್‌ತಿದ್ದ ಪದ್ದಿಷ್ಟನೂ ಇತ್ತ್‌ಲೆ. ಎಲ್ಲಿಗಾರ್ ಹೋಕುತಾದರೆ ಬಾಗ್‌ಲ್ ಎಳ್ದ್ ಹಗ್ಗಲಿ ಕಟ್ಟ್‌ತಿದ್ದೊ. ಆಗ ಕಳ್ಳತನನೂ ಕಮ್ಮಿ ಇತ್ತ್.

ಇನ್ನ್ ಮನೆದ್ ನೆಲ ಹೆಂಗಿರ್ತಿತ್ತ್? ಮಣ್ಣ್‌ನ ಕಲ್ಸಿ ಪೊಳಿ ಮಣೆಂದ ಬಡ್ದ್ ಗಟ್ಟಿ ಮಾಡ್ತಿದ್ದೊ. ಕೈ ಮಣ್ಣ್ ಕೊಟ್ಟ್ ಸಾರ್‌ಸ್‌ತ್ತಿದ್ದೊ. ಮತ್ತೆ ಕರಿ ಅರ್ದ್ ಸಗಣಿಗೆ

ಬೆರ್ಸಿ ಸಾರ್‌ಸ್‌ತ್ತಿದ್ದೊ. ಇದ್ ಆದ ಮೇಲೆ ತೋಡ್‌ಂದ ತಂದ ನಯ್ಸ್ ಕಲ್ಲ್‌ಂದ ನೆಲನ ಅರಿತಿದ್ದೊ. ನೆಲ ಬಾರಿ ಲಾಯ್ಕ ಆತಿತ್. ಅಡ್ಗೆ ಮನೆ, ಬಾಡೆ, ಕೈಯಾಲೆ, ತಿಂಟೆ ಪೂರಾ ಲಕಲಕಾಂತ ಹೇಳ್ವಂಗಿರ್‌ತಿತ್ತ್. ಸಾಯಿಂಕಾಲ ಆರ್ಗಂಟೆಗೆ ಮುಂದೆ ಮನೆ ಗುಡ್ಸಿ ಸಗಣಿ ನೀರ್ ತಕ್ಕ್‌ಳ್‌ಸಿ ಧೂಪ ಹೊಗೆ ಹಾಕ್‌ತ್ತಿದ್ದೊ. ಆಗೆಲ್ಲಾ ಕಾಯ್ಲೆ ಕಸಾಲೆ ಕಮ್ಮಿ ಇರ್ತಿತ್. ಸಗಣಿಗೆ ರೋಗ ನಿರೋಧಕ ಶಕ್ತಿ ಉಟ್ಟುಗಡ. ಈಗ ಸಿಮೆಂಟ್ ನೆಲ, ಇಲ್ಲರೆ ಟೈಲ್ಸ್ ನೆಲ. ಬಚ್ಚಲ್ ಮನೆಗೂ ಟೈಲ್ಸ್. ಹಿಂಗಾಗಿ ನೀರ್, ಎಣ್ಣೆ ಪಸೆನೆಲ್ಲ ಮೆಟ್ಟಿ ಜಾರಿ ಬಿದ್ದ್‌ಕಂಡ್ ಕೈ ಮುರ್ಕಂಡ್, ತಲೆ ಒಡ್ಕಂಡ್ ಎಷ್ಟೋ ಜನ ಆಸ್ಪತ್ರೆಲಿ ಒಳೊ. ಹಂಗಾಗಿ ಟೈಲ್ಸ್ ಮನೆಲಿ ಹೆದ್ರಿ ಹೆದ್ರಿ ಹೆಜ್ಜೆ ಹಾಕೊಕು.

ಆಗೆಲ್ಲಾ ಒಲೆ ಹೆಂಗಿರ್‌ತ್ತಿತ್? ಮೂರು ಕಲ್ಲ್ ಜೋಡ್ಸಿ ಬೆಂಕಿ ಮಾಡಿರೆ ಅದೂ ಒಲೆನೆ. ತಿಂಟೆ ಮಾಡಿ ಒಲೆ ಕೊಯ್ದರೆ ಅದೂ ಒಲೆನೆ. ಈಗ ಅಸ್ತ್ರ ಒಲೆ, ಕಬ್ಬಿಣ ಒಲೆ, ಗ್ಯಾಸ್ ಒಲೆಂತೆಲ್ಲಾ ಬಂದೋವುಟು. ಆದರೆ ಮಣ್ಣ್ ಒಲೆದ್ ಗಮ್ಮತ್ತೇ ಬೇರೆ. ಮಣ್ಣ್‌ದ್ ಒಲೆನ ಹೆಂಗೆ ಮಾಡ್ತಿದ್ದೊ? ಮಣ್ಣ್‌ದ್ ಒಲೆಗೆ ಹುತ್ತದ ಮಣ್ಣ್ ಭಾರಿ ಒಳ್ಳೆದ್. ಯಾಕೆಂತೇಳ್ರೆ ಹುತ್ತದ ಮಣ್ಣ್‌ಲಿ ಕಲ್ಲ್ ಇರ್ದುಲೆ. ಮಣ್ಣ್‌ಲಿ ಕಲ್ಲ್ ಇದ್ದರೆ ತಿಂಟೆ ಒಡ್ದೋದೆ. ಇಲ್ಲರೆ ಬಿರ್‌ಕ್ ಬಂದದೆ. ಹಂಗಾಗಿ ಹುತ್ತದ ಮಣ್ಣ್‌ನ ತಂದ್ ಹೊಡಿ ಮಾಡಿ ನೀರ್‌ಹಾಕಿ ಮೆಟ್ಟಿ ಕಲ್ಸಿ ಒಂದ್ ದಿನ ಹುಳಿ ಬಾಕೆ ಬುಡೊಕು. ಮತ್ತೆ ಮಾರನೆಗೆ ಪುನಾ ಅದೇ ಮಣ್ಣ್‌ನ ಲಾಯ್ಕ ಕೊಚ್ಚಿ ಮೆಟ್ಟಿ ಮೆಟ್ಟಿ ಹದಾ ಮಾಡಿ ಉಂಡೆ ಕಟ್ಟಿ ಅಡುಗೆ ಮನೆಲಿ ತಿಂಟೆ ಮೆತ್ತುವೆ. ತಿಂಟೆ ಮಾಡಿ ಆದ ಮೇಲೆ ಎರಡ್ ಕೊಕ್ಕೆ ಕತ್ತಿಗಳ್‌ನ ಒಂದಕ್ಕೊಂದು ಕೊಕ್ಕೆ ತುದಿ ಮುಟ್ಟುವಂಗೆ ತಿಂಟೆ ಮೇಲೆ ಇಸಿ ಗುರ್ತು ಮಾಡಿವೆ. ಹಿಂಗೆ ಗುರ್ತು ಮಾಡ್ದ ಮೇಲೆ ಒಲೆ ಕೊಯ್ದುವೆ. ಒಲೆಗೆ ಮೂಕು ಇದ್ದದೆ. ಯಾಕೆಂತೇಳಿರೆ ಪಾತ್ರ ಇಸಕನ ಅದ್ ಪುಸ್ಕಂತೆ ಒಲೆ ಒಳಗೆ ಬೀಳಿಕಾಗದ್. ಮತ್ತೆ ಅದೇ ಒಲೆ ಒಳಗೆಂದ ಕೊರ್ದ್ ಕಣ್ಣ್ ಒಲೆ ಮಾಡಿವೆ. ಕಣ್ಣ್ ಒಲೆಗೆ ಮೂರ್ ಮೊಳ್ಳೆ ಮಾಡಿವೆ. ಬೆಂಕಿ ನಾಲಿಗೆ ದಾಟೊಕೊರೆ ಹಂಗೆ ಮಾಡೊಕು. ಇಲ್ಲರೆ ಬೆಂಕಿ ಲಾಯ್ಕ ಹೊತ್ತುದುಲೆ, ಹೊಗೆ ಪೂರಾ ಈಚೆ ಬಂದ್ ಅಡಿಗೆ ಮನೆ ಪೂರಾ ಹೊಗೆ ತುಂಬಿಕಂಡದೆ. ಹಿಂಗೆ ಒಲೆ ಕೊಯ್ದ್ ಒಲೆ ಬಾಯಿನ

ಸಾರ್ನಿ ಒಣಂಗಿದ ಮೇಲೆ ಒಲೆ ಪೂಜೆ ಮಾಡಿ ಬೆಂಕಿ ಮಾಡಿವೆ. ಸುರೂಗೆ ಹಾಲ್ ಕಾಸಿ ಉಕ್ಕಿಸಿವೆ. ಮತ್ತೆ ಯಾವ ಕಾರಣಕ್ಕೂ ಹಾಲ್‌ನ ಉಕ್ಕಿಸಿಕೆ ಬತ್ತ್. ಒಲೆ ತಿಂಟೆನ ಮೆಟ್ಟಿಕೆ ಬತ್ತ್. ಒಲೆ ತಿಂಟೆಲಿ ಹಲ್ಸ್‌ನಕ್ಕಿ, ಗ್ಯಾರ್ದಬೀಜ, ಯಾಲ, ಹಣ್ಣ್ ಮೆಣ್ಸ್ ಇಂತದರ್ನೆಲ್ಲಾ ಒಣಂಗಿಕೆ ಹಾಕ್‌ತ್ತಿದ್ದೊ.

ಒಲೆ ಮೇಲೆ ಬೆಸಗೆಂತ ಕಟ್ಟಿದ್ದವೆ. ಆ ಬೆಸಗೆ ಯಾಗೋಳು ಬೆಚ್ಚಂಗಿದ್ದದೆ. ಅದ್ ಕರಿ ಹಿಡ್ದರೂ ಅದರ ಬೆಲೆ ಅದ್ಕೆ ಉಟ್ಟೇ ಉಟ್ಟು. ಬೆಸಗೆಲಿ ಇಂತದೇ ಇದ್ದದೆಂತ ಹೇಳಿಕಾದುಲೆ. ತರಕಾರಿ ಬೀಜ, ಒಣಂಗಿಲ್ ಮೀನ್, ಉಪ್ಪಣ ಮಡ್ಕೆ, ಪಿಟಾಕಿ, ತೋಟಗ, ಕೇಪ್‌ನ ಕೋವಿ ಮದ್ದ್, ಗಲಾಟೆ ಮಾಡುವ ಮಕ್ಕ ಮನಿ ಇದ್ದರೆ ಚಳ್ಪೆ ಕೋಲು ಇಂತರ್ನೆಲ್ಲಾ ಇಸುವ ಜಾಗನೇ ಬೆಸಗೆ. ಚಳ್ಪೆ ಕೋಲು ಅವ್ವನ ಕೈಗೆ ಸಿಕ್ಕುವಂಗೆ ಸರಿಯಾಗಿ ಇಸಿಕಂಡಿದ್ದದೆ. ಮಕ್ಕ ಗಲಾಟೆ ಮಾಡಕನ, ಓದಿಕೆ ಬರೆಕೆ ಕೂರದಿದ್ದರೆ "ಬೆಸಗೆಂದ ಕೋಲು ತೆಗೆಕಾ"ತೇಳ್ರೆ ಸಾಕ್ ಮಕ್ಕ ಚುಳ್ಳಿಕಂಡ್ ಓಡಿಹೋಗಿ ಓದಿಕೆ ಬರೆಕೆ ಕುದ್ದ್‌ಬುಡ್ತಿದ್ದೊ. ಅದ್ ಇರ್‌ಲಿ, ಇನ್ನ್ ಬೆಸಗೆ ಕೆಳಗೆ ಕೇಪ್‌ನ ಕೋವಿನ ತುಂಬುಸಿ ಹಗ್ಗಲಿ ನೇತಾಡ್ಸಿವೆ. ಆ ಹಗ್ಗನ ಕೋವಿ ನೇಕೇಂತೇಳಿವೆ. ಕೋವಿ ಯಾಗೋಳು ಬೆಚ್ಚಂಗಿದ್ದದೆ. ಗುಂಡ್ ಹೊಟ್ಟಕನ ಚಟ್ಟ್ ಗುಡ್ಡ್‌ಂತೇಳುವ ಪ್ರಶ್ನೆನೆ ಇಲ್ಲೆ. ಕೇಪುಗೂ ಮದ್ದ್‌ಗೂ ನಡುಲಿ ಸೆರೆ ಇದ್ದರೆ ಅಥವಾ ಶೀತ ಹಿಡ್ದಿದ್ದರೆ ಒಂದೋ ಚಟ್ಟ್‌ಂತೇಳಿ ಗುಂಡು ಸಿಡ್ದದೆ. ಇಲ್ಲರೆ ಚಟಕ್‌ಂತೇಳಿ ಸುಮ್ಮನಾದೆ. ಈಗ ಬುಡಿ ಕೋವಿಗೆಲ್ಲಾ ಮೂಲೆ ಸೇರಿಯೊಳೊ. ಹುತ್ರಿಲಿ ಕದ್ರ್ ಕೊಯ್ಯಕನ ಒಮ್ಮೆ ಹೊರಗೆ ತೆಗ್ದರೆ ಮತ್ತೆ ಹೊರಗೆ ಬಾದು ಕೈಲು ಪೋದ್‌ಲಿ. ಇಲ್ಲರೆ ಲೈಸನ್ಸ್ ತೋರ್ಸಕನ. ಅದ್ ಬುಟ್ರೆ ಚುನಾವಣೆ ಸಮೆಲಿ ಪೊಲೀಸ್ ಸ್ಟೇಷನ್‌ಲಿ ಇಸಕನ.

ಹಿಂದೆಲ್ಲಾ ಕೈಲ್‌ಪೋದ್‌ಲಿ ಊರೊಳಗೆ ಎಷ್ಟ್ ಗುಂಡ್ ಹೊಟ್ಟಿತ್‌ತ ಲೆಕ್ಕ ಹಾಕ್‌ತ್ತಿದ್ದೊ. ಈಗೀಗ ಹಂದಿ ಸಾಂಕವೂ ಕಮ್ಮಿ. ಏನಿದ್ದರೂ ಅಂಗ್ಡಿಲಿ ಸಿಕ್ಕಿದೆತ ಅಂಗ್ಡಿಗೆ ಹೋದೇ ಜಾಸ್ತಿ. ಮತ್ತೆ ಈಗೀಗ ಬತ್ತದ ಬೆಳೆನೂ ಕಮ್ಮಿ ಆಗಿ ಶುಂಠಿ ಬಾತ್. ಈಗ ಶುಂಠಿನೂ ಕಮ್ಮಿ ಆಗಿ ಗದ್ದೆ ಪೂರಾ ತೋಟ ಆಗ್ತಾ ಉಟ್ಟು. ಬತ್ತ ಬೆಳ್ದರೆ ನಷ್ಟನೇ ಜಾಸ್ತಿತ ಹೇಳುವ ಕಾಲ ಬಂದೋವುಟು.

* * * * *

# ರೊಟ್ಟಿಗೆ ಬುಟ್ಟ ಹಿಟ್ಟಿಲ್ಲೆ...

ಬೆಳಿಗ್ಗೆನ ಹೊತ್ತ್‌ಲಿ ಕಾಫಿ ಕುಡೆಕೆ ಬನ್ನಿಂತ ಕರ್ದರೆ ತಿಂಡಿ ತಿಂಬಕೆ ಬನ್ನಿತ ಅರ್ಥ. ಊಟದ ಸಮಯ ಆದರೆ ಉಂಬಕೆ ಬನ್ನಿತ ಕರ್ದವೆ. ಅದ್ ಬುಟ್ಟ್ 'ಬಾ ಮುಕ್ಕು'ತ ಹೇಳ್ದು ಸಮಾಧಾನದ ಮಾತಲ್ಲ. 'ತಿಂಬಕೆ ಬಾ' ತ ಹೇಳ್ದು ಸನ ಸರಿಯಾದ ಕ್ರಮ ಅಲ್ಲ. ರೊಟ್ಟಿ ಹಿಟ್ಟ್‌ನ ತಿಂಬೊದುತೇಳಿರೆ, ಅನ್ನನ ಉಂಬೊದುತ ಹೇಳಿವೆ. ತಿಂಬಕನಾಗಲಿ ಉಂಬಕನಾಗಲಿ ಸದ್ದ್ ಮಾಡಿಕಂಡ್, ಚಪ್ಪಿಕಂಡ್ ತಿಂಬಕಾಗದ್. ಕುಡೆಕನ ಸೊರ್ಕ್‌ಂತ ಎಳೆವ ಸದ್ದ್, ನುಂಗಕನ ಗಡ್ಕತ ದೊಂಡೆಗೆ ಇಳಿವ ಸದ್ದ್ ಬಾಕಾಗದ್. ಆದರೆ ಪಾಯ್ಸ ಉಂಬಕನ ಮಾತ್ರ ಸೊರ್ಕ್ ಸೊರ್ಕ್‌ಂತ ಸದ್ದ್ ಮಾಡಿಕಂಡ್ ಉಂಡರೇ ಪಾಯ್ಸದ ರುಚಿ ಸಿಕ್ಕುದು. ಕೆಲವ್‌ಕೆ ಕೆಲವ್ ರುಚಿ ಮಾತ್ರ ಕುಸಿ ಆದೆ. "ನಿಂಗೆ ಯಾಗೊಳು ರುಚಿ ರುಚಿದೇ ಆಕು. ಅದ್ ಬ್ಯಾಡ, ಇದ್ ಬ್ಯಾಡ. ಹೆಂಗೇ ಮಾಡಿಕೊಟ್ಟರೂ ನಿನ್ನದೊಂಡೆಗೆ ಇಳೆದುಲೆತ" ಅವ್ವ ಬೊಯ್ಯೊದುಟ್ಟು.

ಊಟದ್, ತಿಂಡಿದ್ ಸುದ್ದಿನ ಸುರೂಲಿ ಪತ್ತೆದಾರಿ ಕೆಲ್ಸ ಮಾಡುವ ಅಂಗ ಮೂಗು. ದೋಸೆ, ವಡೆ, ಉಪ್ಪಿಟ್ಟ್, ಮಾಸ ಗೈಪು, ಮೀನ್ ಗೈಪು, ಮೀನ್ ಹೊರ್ದದ್, ಗೇರ್ ಬೀಜ ಸುಟ್ಟರೆ, ಅಳುಂಬ ಸುಟ್ಟರೆ, ಮೀನ್ ಸುಟ್ಟರೆ, ಎಸಂಡ್ ಸುಟ್ಟರೆ, ನೀರುಳ್ಳಿ ಸುಟ್ಟರೆ, ಕಜ್ಜಾಯ, ಎಳ್ಳ್‌ಮೆಂತೆ ಮಾಡ್ರೆ, ಅದ್ ಇಂತದೇಂತೇಳಿ ಮೂಗು ಸರಿಯಾಗಿ ಪತ್ತೆ ಮಾಡಿಯೇ ಮಾಡ್ದೆ. ಸ್ಕೂಲ್‌ಂದ ಬರುವ ಮಕ್ಕ ಸಾಯಂಕಾಲ ಉಬ್ಬುಲು ಹತ್ರ ಬಂದ್ ಎತ್ತಕನೇ ಗೊತ್ತಾಬುಟ್ಟದೆ "ಅವ್ವಾ ನೀನ್ ಇಂದ್ ಇಂತದೇ ಮಾಡ್ಯೊಳಾ"ಂತ ಹೇಳದೆ ಬುಡಿಕಿಲೆ.

ಬೆಲ್ಲದ ಅಕ್ಕಿ ಪಾಯ್ಸ ಉಂಬಕನ ಕಾಯಿ ಹೂ ಸಿಕ್ಕಿರಂತೂ ಮೊಕ

ಅರಳ್‌ಸಿಕಂಡ್ ಕಾಯಿನ ಚರಂ ಕರಮ್‌ತ ಅಗ್ದ್ ತಿಂಬೊದೇ ಒಂದ್ ಖುಷಿ. ಬಿಸಿ ಬಿಸಿ ಪಾಯ್ಸನ ಬಾಳೆಲೆಲಿ ಹಾಕಂಡ್ ಉಂಡರಂತೂ ಆ ಪರಿಮಳನ ಹೇಳಿಕಂಬಕಾಲೆ. ಅಂತೂ ಸಿಂಹಿದ್ ಎಂತಾರ್ ಉಂಡರಂತೂ ಆಹಾ! ಬೆಲ್ಲದ ಜೋನಿ, ರಸಗುಲ್ಲಂತೇಳಿಕಂಡ್ ತಿಂದವೆ. ಊಟ ಏನಾರ್ ಚಪ್ಪೆ ಇದ್ದರೆ ಥತ್, ಚಪ್ಪೇ ಚಾರ್, ನೀರ್‌ಂದ ತೆಗ್ದ್ ತಿಂದಂಗಾತ್‌ತ ಹೇಳಿವೆ. ಹುಳಿ ಹಂಞ ಜಾಸ್ತಿ ಆತೋ ಪ್ಪ್. ಹುಳೀ ಲೊಟ್ಟೇಂತೇಳಿಕಂಡ್ ಕಣ್ಣ್‌ನ ಸಣ್ಣ ಮಾಡಿಕಂಡ್ ನಿಂಬುಳಿನ ಹಿಂಡಕನ ಮೊಕ ಆದಲ್ಲ ಹಂಗೆ ಆಬುಟ್ಟದೆ. ಉಪ್ಪು ಜಾಸ್ತಿ ಆದರೆ ಬುಡಿ, ಉಪ್ಪುನ ಸಿಂಗಿಂತೇಳಿವೆ. ಒಂದಂತೂ ಸತ್ಯ. ಹಂಞ ಚಪ್ಪೆ ಇದ್ದರೆ ಹೆಂಗೂ ತಿಂದ್‌ಬುಡಕ್. ಉಪ್ಪು ಜಾಸ್ತಿ ಆತೊ ಹೊಟ್ಟೆ ಹಸ್ತಿದಿದ್ದರೂ ಊಟ ಬುಟ್ಟ್ ಏಳ್‌ವ ಸ್ಥಿತಿ ಆಬುಟ್ಟದೆ. ಖಾರಮನಿ ಆದರೆ ಏನ್ ಕಥೆ? ಅಯ್ಯೋ ಅದ್ ಖಾರದ ಕೊಳ್ಳೆ. ತಿನ್ನೊಕು, ತಿಂಬಕಾದುಲೆ. ಅಂತೂ ಸುಂಯ್ಯಿಕಂಡ್, ಬುಸುಗುಟ್ಟಿಕಂಡ್ ತಿಂದವೆ. ಮತ್ತೆ ನೋಡೊಕು. ಕೂರಿಕೂ ಆದುಲೆ, ನಿಲ್ಲಿಕೂ ಆದುಲೆ. ಏಳುದು ಕೂರುದು ಮಾಡಿಕಂಡ್ ತಣ್ಣೀರ್ ಕುಡ್ದವೆ. ಆದರೂ ಸನ ಖಾರ ಕಮ್ಮಿ ಆದೆನಾ? ಇಲ್ಲೆ. ಮತ್ತೆ ಕೆಲವು ಬಿಸಿ ನೀರ್ ಕುಡ್ದವೆ. ಆಗಂತೂ ಖಾರ ತಾರಾಮಾರ ಜಾಸ್ತಿ ಆದಂಗಾಗಿ ಮೆಲ್ಲ ಕಮ್ಮಿ ಆದೆ. ಮತ್ತೆ ಕೆಲವು ಕಿಚ್ಚ್‌ನ ಕೊಳ್ಳಿನ ನಾಲಗೆ ಹತ್ರ ಹಿಡ್ದವೆ. ಆಗ ನಾಲಗೆಂದ ತೊಟ ತೊಟಂತ ನೀರ್ ತೊಟ್ಟಿಕ್ಕಿದೆ. ಖಾರ ಜಾಸ್ತಿ ಆಗಿ ಕೆಲವುಕೆ ಬೆನ್ನ್ ಪೂರ ತೊರ್ರಿಕಂಡ್ ಬಂದಂಗಾಗಿ ಗೋಡೆಗೆ ಬೆನ್ನುನ ದರಾ ಬರಾಂತ ಉಜ್ಜವೂ ಒಳೊ. ಖಾರ ತಿಂದರೆ ಕಾಯಿಲೆ ಬಾದುಲೆತ ಕೆಲವರ ವಾದ. ಆದರೆ ತಾರಾಮಾರ ಖಾರ ತಿಂದರೆ ಏನಾದು ಹೇಳಿ? ಕೆಲವ್‌ಕೆ ಹಾಗಲಕಾಯಿ ಗೈಪುನೋ ಪಲ್ಯನೋ ಒತ್ತಾಯ ಮಾಡಿ ತಿನ್ಸಿರೆ, ಅಯ್ಯಪ್ಪಾ ಕಂಹಿ ವಿಷಂತೇಳಿ ತಿಂಬೊದೇಲೆ. ವಿಷನ ಯಾರಾರ್ ತಿಂದ್ ರುಚಿ ನೋಡ್ದವು ಒಳೊನಾ? ಅಲ್ಲಾ, ಹಂಗೆ ತಿಂದವ್ ರುಚಿ ಹೇಳಿಕೆ ಕುದ್ದೊಳನಾ? ಅಂತೂ ವಿಷಂತೇಳುವಂತದ್ದು ಕಂಹಿಂತೇಳಿ ರೂಢಿಯಾಗುಟು. ಇನ್ನ್ ಅಡುಗೆ ಏನಾರ್ ಅಡಿ ಹಿಡ್ತೊ, ಆ ಸೂಂಟ್ರು ಹಿಡ್ದರ ಯಾರ್ ತಿಂದವೆಂತೇಳಿಕಂಡ್ ತಿಂದವೆ.

ಅಂತೂ ಸಿಂಹಿಯಾದರೆ ಬೆಲ್ಲದ ಜೋನಿ,

ಚಪ್ಪೆ ಆದರೆ ಚಪ್ಪೆ ಚಾರ್,

ಉಪ್ಪು ಆದರೆ ಉಪ್ಪುನ ಸಿಂಗಿ,

ಖಾರ ಆದರೆ ಖಾರದ ಕೊಳ್ಳೆ

ಕಂಹಿ ಆದರೆ ಕಂಹಿ ವಿಷ – ಹಿಂಗೆ ಅದದ್‌ಕೆ ಅದದರ ಪಟ್ಟ ಕಟ್ಟಿಯೊಳೊ.

ಹಿಂದೆಲ್ಲಾ ಮಕ್ಕಮರಿಯಾಗಿ ಮನೆಗೆ ನೆಂಟ್ರ ಬಂದೋಂತಾದರೆ ಹಲ್ಸ್‌ನ ಹಣ್ಣ್‌ದ್ ಕಜ್ಜಾಯ, ಇಲ್ಲರೆ ಬಾಳೆಹಣ್ಣ್‌ದ್ ಅದೂ ಇಲ್ಲರೆ ಬೆಲ್ಲದ ಕಜ್ಜಾಯ ಇಲ್ಲರೆ ದೋಸೆ ಹೊಯ್ಯೇತಿದ್ದೊ. ಚೆಟ್ಟಿಟ್ಟ್ ಮಾಡ್ತಿದ್ದೊ. ಅದರ್‌ನ ಕೆಂಡದ ಹಿಟ್ಟ್ಂತನೂ ಹೇಳಿವೆ. ಕೂಗಲೆ ಹಿಟ್ಟ್, ನೀರ್ ದೋಸೆ, ಅಪ್ಪದ ಹಿಟ್ಟ್, ಓಡ್‌ದೋಸೆ, ಸೆಡೆಕಾವ್ ಹಿಟ್ಟ್, ರೊಟ್ಟಿ ಪಾಯ್ಸ, ತೊಳ್‌ಸ್‌ನ ಹಿಟ್ಟ್ ಹಿಂಗೆ ತರಾವರಿ ತಿಂಡಿ ಇರ್ತಿತ್. ಹಸ್ನಕ್ಕಿ ಕಾಲಲಿ ಹಸ್ನಕ್ಕಿನ ಹೊರ್ದ್ ತಿಂದರೆ, ಮತ್ತೆ ಕೆಲವ್ ಅದರ್‌ನ ಹೊರ್ದ್ ಕುಟ್ಟಿ ಹೊಡಿಮಾಡಿ ಕಾಯಿ, ಬೆಲ್ಲ ಸೇರ್ಸಿ ಒಂದ್ ಹೊಸಾ ಪಾಕ ಮಾಡ್ತಿದ್ದೊ. ಕೆಲವುಕೆ ಅದ್ ಆದುಲೆ. ಎದೆ ಉರಿಂತ ತಿಂಬೊದುಲೆ. ಜೋಳ ಮನಿ ಇದ್ದರೆ ಅದರ್‌ನ ಹೊರ್ದವೆ. ಬತ್ತದ ಹೊದ್ರಿ ಮಾಡಿವೆ. ಆದರೆ ಹೊದ್ರಿ ಹೊರೆದು ಸಾಮಾನ್ಯಾಗಿ ಚವುಂಡಿಗೋ ಗುಳಿಗಂಗೋ ಕೊಡಕನ. ಕೆಲವು ಮನೆಲಿ ಕೊಸ್ಲಕ್ಕಿನ ಹೊರ್ದವೆ. ಕೆಂಪು ಆಗುವಸ್ಟ್ ಹೊರ್ದ್ ಅದ್ಕೆ ಹಂಞ ಉಪ್ಪು ಹಾಕಿ ನೀರುಳ್ಳಿನೋ, ತೆಂಗ್‌ನಕಾಯಿ ಹೂನೋ ಮೇಕಿಕಂಡ್ ತಿಂದ್ ಕರಿ ಕಾಫಿ ಕುಡ್ದರೆ ನಾಕಂಟೆದ್ ತಿಂಡಿ ಆದಂಗೆ. ಕೆಲವೆಲ್ಲ ಕುಡುನ ಸನ ಹೊರೆತಿದ್ದೊ, ಇಲ್ಲರೆ ಬೇಸಿ ತಿಂಬತಿದ್ದೊ.

ನೀರ್ ದೋಸೆಯಂತೂ ವಿಶೇಷ ತಿಂಡಿ. ನಂಟ ಬಂದರೆ ನೀರ್ ದೋಸೆನೂ ಕಾಯಾಲ್‌ನೂ, ಇಲ್ಲರೆ ಬೆಣ್ಣೆ, ಕಾಯಿ ಹೂ ಮತ್ತೆ ಸಕ್ಕರೆ ಬಾರಿ ಲಾಯ್ಕಾದೆ. ಕಾಯಿ ಹೂಂತೇಳ್ರೆ ಕಾಯಿ ತುರಿಂತ ಅರ್ಥ. ನೀರ್ ದೋಸೆಗೆ ಅದೂ ಅಲ್ಲದಿದ್ದರೆ ಕೋಳಿ ಗೈಪು. ನೂಪಿಟ್ಟ್‌ಗೆನೂ ಕೋಳಿ ಗೈಪು. ಬಟ್ಲಿಟ್ಟ್ ಮತ್ತೆ ಕಡಂಬುಗೆ ಹಂದಿ ಗೈಪು ಮಾಡಿವೆ. ಅದರ್‌ಲೂ ಬೆಣ್ಣೆ ಕಡುಂಬು ವಿಶೇಷ. ಏನೇ ಆದರೂ 'ರೊಟ್ಟಿಗೆ ಬುಟ್ಟ ಹಿಟ್ಟಿಲ್ಲೆ, ಅಳಿಯಂಗೆ ಬುಟ್ಟ ನಂಟ ಇಲ್ಲೆ'ತ ಗಾದೆ ಮಾಡಿಬುಟ್ಟೊಳೊ.

ಅಳಂಬು ಗೈಪುಗೂ ರೊಟ್ಟಿಗೂ ಭಾರೀ ಲಾಯ್ಕಾದೆ. ಕಣಿಲೆಗೈಪು ಇದ್ದರೆ ಹೇಳ್ದೇ ಬ್ಯಾಡ. ಪಜ್ಜಿಗಳ ರಾಜ ಕುಡುಪಜ್ಜಿಂತೇಳಕ್. ಕುಡುಂತೇಳ್ರೆ ಹುರುಳಿಂತ ಅರ್ಥ. ಕುಡುಪಜ್ಜಿನ ರೊಟ್ಟಿಗೇ ಹಾಕಂಡ್ ತಿನ್ನೊಕು. ಬಟ್ಲ್‌ಗೆ ಹಾಕಂಡ್ ಪಜ್ಜಿ ತಿಂಬೊದ್‌ಕಿಂತ ರೊಟ್ಟಿಗೇ ಹಾಕಂಡ್ ತಿಂಬೊದು ಭಾರೀ ರುಚಿ ಕೊಟ್ಟದೆ. ರೊಟ್ಟಿ ಮೇಲೆ ಪಜ್ಜಿ ಹಾಕಂಡ್ ಆ ಪಜ್ಜಿ ಮೇಲೆ ಬೆಣ್ಣೆ ಕುದ್ದರುಟ್ಟಲ್ಲಾ ಮೂರೋ ನಾಲ್ಕೋ ರೊಟ್ಟಿ ಗುಳುಂ ಆದು ಗೊತ್ತೇ ಆಕಿಲೆ. ಆದರೆ ಒಂದ್ ಮಾತ್ ಏನ್‌ಂತೇಳ್ರೆ ಹಿಂದೆಲ್ಲಾ ಆನೆ ಮೆಟ್ಟಷ್ಟ್ ಅಗಲದ ರೊಟ್ಟಿ ಇರ್ತಿತ್. ಈಗನಂಗೆ ಅಂಗೈ ಅಗಲದ ಮಿಷನ್ ರೊಟ್ಟಿ ಅಲ್ಲ, ಗುದ್ದಲಿ ತುಪ್ಪ ಹಾಕಿ ಗಮನ ಸಣ್ಣ ಅಕ್ಕಿಂದ ತುಪ್ಪದ ಅನ್ನ ಮಾಡ್ತಿದ್ದೊ. ಗುದ್ದಲಿ ತುಪ್ಪಂತೇಳ್ರೆ ಆರ್‌ಜಿ ತೇಳಿವೆಯಲ ಅದ್. ಅದರ ಉಂಡರಂತೂ ಕೈ ಪೂರಾ ಗಮ್‌ಗಮಾ. ಉಂಡ್ ಕೈ ತೊಳೆಕೆ ಮನ್ನೇ ಬಾತಿತ್ಲೆ. ಆದರೆ ಇಂದ್ ಸಮಾರಂಭಲಿ ಕೈ ತೊಳೆಟೇ ಇಲ್ಲೆ! ಬಟ್ಲ್‌ನ ಕಾಗದಲಿ ಸೀಟಿಕಂಡ್ ಬೊಫೇಂತೇಳಿ ಉಂಡವೆ.

ಒಮ್ಮೆ ಒಂದ್ ಮನೆಲಿ ಗೆಂಡೆ ಮೀನ್ ಗೈಪು ಮಾಡಿದ್ದೊ ಗಡ. ಬನ್ನಿಯಣ್ಣಿ ರೊಟ್ಟಿ ತಿನ್ನಿಂತ ಕರ್ರೊಗಡ. ಏನಾರಾಗಲಿ ಗೆಂಡೆ ಮೀನ್ ಸಿಕ್ಕುದೇ ಅಪ್ರೂಪತ ಅವಂಗೆ ಖುಸೀ ಆತ್. ಕೈ ತೊಳ್ದ್ ಕುದ್ದತ್‌ಗಡ. ನಾಕ್ ರೊಟ್ಟಿ ತಿಂಬದೆ ಬುಡಿಕಿಲೆತ ತಿಂಬಕೆ ಕುದ್ದತ್. ಅಲ್ಲಿ ಬಟ್ಲ್ ನೋಡಕನೇ ಗೊತ್ತು. ಹಾಲ್ಗೆಂಡೆನೂ ಅದ್ರೊಟ್ಟಿಗೆ ಒಣಂಗಿಲ್ ಮೀನ್‌ನೂ ಸೇರ್ಸಿ ಮಾಡ್ದ ಗೈಪು ಅದ್. ಆದರೆ ಆ ಗೈಪುನ ಗೆಂಡೆ ಮೀನ್ ಗೈಪುತ ಹೇಳ್ದ ಮಾತ್ ಅರ್ಥ ಆಗದೆ ಅಂವ ಬೆಪ್ಪಾತ್‌ಗಡ. ಹ್ಞ, ಅದ್ ಇರ್‌ಲಿ, ನಾ ಪಜ್ಜಿ ವಿಚಾರ ಹೇಳ್ತಿದ್ದೆಲ್ಲಾ. ಜರ ಬಂದ ಬಾಯಿಗೆ ಹುಣ್ಸೊಳಿ ಪಜ್ಜಿ ಹೇಳಿ ಮಾಡ್ಸಿದ್. ಅನ್ನನೂ ಹುಣ್ಸೊಳಿ ಪಜ್ಜಿನೂ ಉಂಡರೆ ನಾಕ್ ಬಾಯಿ ಸೇರ್‌ದೆ. ಆ ಪಜ್ಜಿಗೆ ಮೀನ್‌ನ ಸುಟ್ಟು ಮಿಶ್ರ ಮಾಡ್ರೆ ಉಟ್ಟಲಾ! ಬುಡಿ, ಆ ಮಾತ್ ಈಗ ಬ್ಯಾಡ. ಗೈಪುನ ಬಾಳೆ ಕೂಂಬೆದ್ ಪಜ್ಜಿ ರುಚಿಯಾಗಿದ್ದದೆ. ಕಂಹಿಹುಳಿ ಪಜ್ಜಿ ಮಾಡಿ ಒಗ್ರಣೆ ಹಾಕಿ ಅನ್ನದೊಟ್ಟಿಗೆ ಉಂಬಕೆ ಬಾರಿ ಲಾಯ್ಕಾದೆ. ಆದರೆ ಒಂದ್ ವಿಷಯ ಏನ್‌ಂತೇಳ್ರೆ ರಾತ್ರೆ ಊಟಕ್ಕೆ ಹುಣ್ಸೊಳಿ ಪಜ್ಜಿ ಮತ್ತೆ ಕಂಹಿ ಹುಳಿ ಪಜ್ಜಿ ಬ್ಯಾಡ. ಯಾಕೆಂತೇಳ್ರೆ ಉಂಡ್ ಮಲ್ಗಿ ಸಮ ಇರ್ಲ್ಲಿ ಮತ್ತೆ ಎದ್ದ್ ಕುದ್ದ್‌ಕಂಡ್ ಎರಡ್ ಬಾಯಿ ಉಣ್ಣೊಕುಂತೇಳ್ರೆ ಎಂತ ಮಾಡ್ದು? ಹುಳಿ

ಪಜ್ಜಿಗೆ ಅಂಥಾ ಜೀರ್ಣಶಕ್ತಿ ಉಟ್ಟು. ಹಂಗಾಗಿ ಬೇಗ ಹೊಟ್ಟೆ ಹಸ್ತದೆ. ಕೆಂಬಡೆ ಕೊಡಿ, ಗಿಣ್ಕೆ ಸೊಪ್ಪು, ಒನಗಣ ಸೊಪ್ಪು, ಚರ್ಮೆಕೊಡಿ, ಕೆಸನ ಚಿರಿ, ಪಲ್ಯಕೆ ಗೈಪಿಗೆಲ್ಲಾ ಭಾರಿ ಒಳ್ಳದ್.

ಮಜ್ಜಿಗೆ ಗಂಜಿ ಮಧ್ಯಾಹ್ನದ ಊಟಕೆ ಒಳ್ಳದಾದೆ. ಕೆಲವು ಮಜ್ಜಿಗೆ ಆಂಬರ ಮಾಡಿವೆ. ಒಗ್ರಣೆ ಹಾಕಿ ಪಾತ್ರ ಇಳ್ಸಿ ಮಜ್ಜಿಗೆ ಹೊಯ್ದ್ ಉಪ್ಪು ಹಾಕಿರೆ ಕುಡೆಕೂ ಲಾಯ್ಕ, ಊಟಕೂ ಲಾಯ್ಕ. ಒಗ್ರಣೆಲಿ ಮೆಣ್ಸದ್ ಬೀಜ ಹಂಞ ಕರಿ ಆಕು. ಒಳ್ಳ ಟೇಸ್ಟಾದೆ. ಒಲೆಲಿ ಚೆಟ್ಟಿ ಇರಕನೇ ಮಜ್ಜಿಗೆನ ಒಯ್ಯಕಾಗದ್'ಂತೇಳಿವೆ.

ಹಳ್ಳಿಲಿ ಅಂಬುಲಿ ಉಪ್ಪಕಾಯಿ, ಕೊಸ್ಲಕ್ಕಿ ಗಂಜಿ ಉಪ್ಪಕಾಯಿ, ಕೆಂಬಡೆ ಪಾಯ್ಸ, ಸೋರೆಕಾಯಿ ಪಾಯ್ಸ, ಸೋಂತೆ ಕಾಯಿ ದೋಸೆ, ರಾಗಿರೊಟ್ಟಿ, ರಾಗಿ ತೆನೆನ ಸುಟ್ಟ್ ಉರುಂಬಿ ಕಡ್ದ್ ಮಾಡ್ತಿದ್ದ ದೋಸೆ, ಬೇಸಿದ ಬೆಲ್ಲದ ಗೆಣ್ಸ್, ಮರ ಗೆಣ್ಸ್, ಬೇಸಿದ ಕೆಂಬಡೆ, ಹಿಂಗೇ ಎಷ್ಟೋ ಜನ ತಿಂದ್ ಉಂಡವು ಬದ್ಕ್‌ನ ದೂಡಿಕಂಡ್ ಬಂದವ್. ಇಂತ ಅನುಭವನ ಹೇಳಿಕಂಬವು ಈಗಳೂ ಕೆಲವ್ ಒಳೊ.

* * * * *

# ಕಾಗದ

ವಾಹನ ಇಲ್ಲದ ಕಾಲಲಿ ನಮ್ಮ ಹಿರಿಯವ್ ಎಷ್ಟೇ ದೂರಾದರೂ ನಡ್ದೇ ಹೋತಿದ್ದೊ, ನಡ್ದೇ ಬಾತಿದ್ದೊ. ಎಲ್ಲೋ ಒಮ್ಮೊಮ್ಮೆ ಎತ್ತ್‌ನ ಗಾಡಿ ಬುಟ್ರೆ ಮತ್ತೆಂತನೂ ಇತ್ಲೆ. ಫೋನ್‌ಗೀನ್‌ದ್ ಮಾತೇ ಇಲ್ಲೆ. ರೇಡಿಯೋನೂ ಅಷ್ಟೇ. ಊರೊಳಗೆ ಒಂದೆರಡ್ ಇದ್ದರೆ ಹೆಚ್ಚ್. ರೇಡಿಯೋ ತಕಂಬಕೆ ಆಗ ಲೈಸನ್ಸ್ ಬೇಕಾಗಿತ್ತ್. ಲೈಸನ್ಸ್ ಇಲ್ಲದಿದ್ದರೆ ರೇಡಿಯೋ ತಕಂಬಕೆ ಬತ್ತ್. ಇನ್ನ್ ದಿನ ಪತ್ರಿಕೆ ಓದುವವು ಕಮ್ಮಿ. ಯಾಕೆಂತೇಳಿರೆ ಓದಿಕೆ ಬಂದರಲ್ಲ ಪೇಪರ್ ತಾದು. ಹಂಗಿದ್ದರೂ ಖಾಸಾ ಸಂಬಂಧಿಕರ್‌ಗೆ ಕಾಗದ ಬರ್‌ಸ್ತ್ತಿದ್ದ ಪದ್ಧತಿ ಕೆಲವ್‌ರ್‌ಲಿ ಇತ್ತ್. ಕೈಂದ ಕೈಗೆ ಕಾಗದ ಬಂದ್ ಎತ್ತ್‌ತಿತ್ತ್. ಇಸ್ಕೂಲ್‌ಗೆ ಹೋತಿದ್ದ ಮಕ್ಕ ಮನಿ ಇದ್ದರೆ ಕಾಗದ ಎತ್ತುಸುದು ಸುಲಾಭ ಆತಿತ್ತ್. ಕಾಗದ ತಂದ್ ಕೊಟ್ಟ ಮಕ್ಕಳಿಗೆ ಏನೋ ಒಂದ್ ಖುಷಿ. ಕಾಗದ ತಂದ್ ಕೊಟ್ಟ ಮಕ್ಕಳ್‌ಂದನೇ ಕಾಗದನ ಓದಿಸಿಕಂಬತಿದ್ದೊ. ಅಷ್ಟೇ ಅಲ್ಲ, ಅದೇ ಮಕ್ಕಳ ಕೈಲಿ ಕಾಗದ ಬರ್‌ಸಿ ಪೋಸ್ಟ್ ಮಾಡಿಕೆ ಹೇಳ್ತಿದ್ದೊ.

ವರ್ಷಕ್ಕೆ ಒಂದೋ ಎರಡೋ ಬರೆತಿದ್ದ ಕಾಗದ, ಅದ್ಕೆ ಬಾತಿದ್ದ ಉತ್ತರನ ಓದುದೇ ಒಂದು ಹಬ್ಬ. ಯಾಕೇತೇಳಿರೆ ಆ ಕಾಗದಲಿ ಮನೆದ್ ಮತ್ತೆ ಊರ್‌ದ್ ಎಲ್ಲಾ ವಿಷಯನ ಬರೆತಿದ್ದೊ. ಕಾಗದ ಓದ್‌ತಾ ಇರಕನ ಆ ಮನೆ, ಆ ಇಡೀ ಊರೇ ಕಣ್ಣಿಗೆ ಕಾಂಬಂಗಿರ್‌ತಿತ್ತ್. ಆ ಕಾಗದನ ಗೋಡೆದ್ ದೇವ್ರ ಗೂಡ್‌ಲಿ ಇಸ್‌ತಿದ್ದೊ. ಮೊದುವೆ ಕಾಗದ ಮನಿ ಆದರೆ ಹೊರಗೆ ಕೊಕ್ಕೆಗೆ ಕೋಸ್‌ತಿದ್ದೊ. ಅದೆಷ್ಟೋ ವರ್ಷದ್ ಮೊದುವೆ ಕಾಗದ ಅದರ್ಲಿ ಇರ್ತ್‌ತಿತ್ತ್.

ಮೊದುವೆ ಮಾಡಿ ಕೊಟ್ಟ ಅಕ್ಕಂಗೆ ತಮ್ಮ ಬರೆತಿದ್ದ ಕಾಗದ ಹೆಂಗೆ ಇರ್ತಿತ್ತ್‌ತ

ನೋಣ್ನೊ. ಕಾಗದದ ಮೇಲೆ ಮೂಲೆಲಿ ತಾರೀಕ್ ಬರೆತಿದ್ದೊ. ಮತ್ತೆ "ಉಭಯ ಕುಶಲೋಪರಿ ಸಾಂಪ್ರತಃ" ಬರ್ದ್ ಪ್ರೀತಿಯ ಅಕ್ಕ ಮತ್ತೆ ಭಾವನವರ ಪಾದಾರವಿಂದಗಳಿಗೆ ನಿಮ್ಮ ತಮ್ಮ ಮಾಡುವ ಸಾಷ್ಟಾಂಗ ಪ್ರಣಾಮಗತ ಒಕ್ಕಣೆ ಬರ್ದಮೇಲೆ ಬಾಕಿ ಸಂಗತಿ ಬರೆತಿದ್ದೊ. "ಇಲ್ಲಿ ನಾವೆಲ್ಲವ್ ನಿಮ್ಮೆಲ್ಲರ ಆಶೀರ್ವಾದಂದಲೂ, ಶ್ರೀ ವೆಂಕಟರಮಣಸ್ವಾಮಿ ಕೃಪೆಂದಲೂ, ಊರು ದೇವರ ದಯೆಯಿಂದಲೂ ಆರೋಗ್ಯಲಿ ಒಳೊ. ತದೋ ರೀತಿ ಅಲ್ಲಿ ನೀವು ಸೌಖ್ಯಲಿ ಇರುವರಿತ ಭಾವಿಸಿಯೊಳೊ. ನಿಮ್ಮ ಮಕ್ಕ ಎಲ್ಲ ಪಾಸಾಗೊಳನಾ? ಹಂಗಾಮಿ ಕೆಲ್ಸ ಹೆಂಗಾತ್? ಮಳೆ ಹೆಂಗುಟ್ಟು? ಇಲ್ಲಿ ನಮ್ಮ ಮಕ್ಕ ಎಲ್ಲಾ ಪಾಸಾಗೊಳೊ. ಇಲ್ಲಿ ಹಂಗಾಮಿ ಕೆಲ್ಸ ಸರಿಯಾಗಿ ಸುರಾತ್‌ಲೆ. ಚಾಮೆವ್ವಂಗೆ ಹಂಞ ಹುಷಾರ್ ಕಮ್ಮಿ. ಸೊಂಟ ಬೇನೆ, ಕೈ ಕಾಲ್ ಬಚ್ಚುದು, ಕೈ ಕಾಲ್ ಪುಳೆದುತ ಹೇಳ್ತಾ ಇದ್ದದೆ. ವಯಸ್ಸೂ ಆತಲ್ಲ. ಇಂದ್ ನಾಳೇತೇಕ್ರೆ ತೊಂಬತ್ತು ದಾಟಿದೆ. ಮೊನ್ನೆ ಒಡಿಕಡ್ಸಿದೆ. ಈಗ ನರ್‌ಕಿಕಂಡ್ ಬುಕ್ಕಿಕಂಡ್ ಉಟ್ಟು. ಇರ್‌ಲ್ ಇಡೀ ಪರಪರಾತ ಎಂಥದೋ ಮಾತಾಡಿಕಂಡಿದ್ದದೆ. ಮಾಮೂಲಿನಂಗೆ ಅಂದಾಗಿ ಕಾರ್ತಿಂಗಳ ದೆವ್ವಕೆ ಕೊಟ್ಟೊ. ಕೋಳಿ ಕಡ್ತ ಸಿಕ್ಕದೆ ಬಾರಿ ಕಷ್ಟ ಆತ್. ಮೊಟ್ಟೆ ಇಕ್ಕದೇ ಇರುವ ಕೊಳಿನೇ ದೆವ್ವಕೆ ಬೇಕು. ಹಂಗಾಗಿ ಊರೆಲ್ಲಾ ಹುಡ್ಕಿ ಒಂದ್ ಕಡೆ ಮೂರು ಕಡತಗ ಸಿಕ್ಕಿದೊ. ಅದ್ರ ರೇಟೋ ತಲೆ ಕೊಡಿಲಿಟ್ಟು. ತೊಪ್ಪುಟಕ್ಕೊಂದು ರೇಟ್ ಹೇಳ್ದೊ. ಅಂತೂ ತಂದ್ ಬುಟ್ಟ್‌ಕಂಡೆ. ಒಂದರ ಇರ್‌ಲ್ ಪೆರ್ಪಣ ಹಿಡ್ದ್ ಬುಡ್ತ್.

ಮಳೆ ಬಾರಿ ಕಮ್ಮಿ ಉಟ್ಟು. ಭೂಮಿಗೆ ಭಾಷೆ ಕೊಟ್ಟ ಆರಿದ್ರಾ ಮಳೆ ಹೊಡ್ತ್‌ಲೆ. ಎಲ್ಲೂ ಜಲ ಆತ್‌ಲೆ. ಗುಂಡಿ ಗದ್ದೆ ಬುಟ್ಟರೆ ಮಾನಿ ಗದ್ದೆಗೆ ನೀರಿಲ್ಲೆ. ರಾಗಿ, ಜೋಳ, ಬಾಳೆ, ಮರಗೆಣ್ಸ್, ಇಲ್ಲರೆ ಕೆಸ ಹಿಂಗೆ ಎಂತಾರ್ ಬೆಳ್ಸುದೇ ಒಳ್ಳೆದ್‌ತ ಕಂಡದೆ. ಹಿಂದೆಲ್ಲಾ ಹೇಳ್ತಿದ್ದೊ ನೂರ್ ವರ್ಷಕ್ಕೆ ಒಮ್ಮೆ ಕಟ್ಟೆ, ನೂರ್ ವರ್ಷಕೆ ಒಮ್ಮೆ ಹೆಟ್ಟೆಂತ. ಹಂಗೆ ಈಗ ಬೆದ್ರ್ ಪೂರಾ ಕಟ್ಟೆ ಬಂದುಟ್ಟು. ನಂಗೆ ಗೊತ್ತಿದ್ದಂಗೆ ನೂರ್ ವರ್ಷಕೆ ಅಲ್ಲ ನಲ್ವತ್-ನಲ್ವತ್ತೈದ್ ವರ್ಷಕ್ಕೆ ಕಟ್ಟೆ ಬಂದದೆತ ಕಂಡದೆ. ಬೆದ್ರ್‌ಗೆ ಕಟ್ಟೆ ಬಾಕನ ಬರಗಾಲ ಬಂದದೆತ ಹೇಳಿವೆ. ಅದ್ ನಿಜಾತ ಕಂಡದೆ. ಎಲಿ ಹೆಗ್ಗಣಗ ಜಾಸ್ತಿ ಆಬುಟ್ಟೊಳೊ.

ಹೇಳ್ದಂಗೆ ನಮ್ಮ ಚೋಮಿ ಹಸ್ ಕರ್ ಹಾಕುಟ್ಟು. ಮೊನ್ನೆ ಹುಣ್ಣಿಮೆಲಿ ಹಾಕಿದ್. ಹೆಣ್ಣ್ ಕರ್, ಎರಡ್ ದಪ ಗಿಣ್ಣ್ ಕಾಸಿದೊ. ಗುರುವಣ ಹೋರಿ ಅರ್‌ಗಿಸ್ ಹಟ್ಟಿಗೆ ಬಾತಿತ್‌ಲೆ. ಅದರ ಕಾಯಿ ತಟ್ಟಿದ ಮೇಲೆ ಈಗ ಸರಿಯಾಗಿ ಹಟ್ಟಿಗೆ ಬಂದದೆ. ಈ ಸತಿ ಅದರ ತಿದ್ದಿದೆ. ಈಗ ಲಾಯ್ಕ ಹೂಡಿಕೆ ಬಂದದೆ. ಇಲ್ಲಿಗಂಟ ಹೊಡಿಗೆ ಊಡ್ದ್. ಇನ್ನ್ ನೀರ್‌ಗೆ ಕಟ್ಟಕನ ಹೆಂಗೆ ಆಡ್ದೆಯೋ ಏನೊ.

ಈಗ ಒಂದ್ ಕಡೆಂದ ಆನೆ ಕಾಟ ಸುರಾವುಟು. ಚಾಳೆ, ಬಾಳೆ, ಬೈನೆ ಕಂಡಲ್ಲಿ ಬುಡ್ದುಲೆ. ಹಲ್ಸನ ಹಣ್ಣ್ ಮನಿ ಇದ್ದರೆ ಹೇಳ್ದೇ ಬೇಡ. ಪುಣ್ಯಕೆ ನಮ್ಮ ತೋಟಕೆ ಇನ್ನೂ ಬಾತ್‌ಲೆ. ನಾವ್ ಪೈಂಗುತ್ತಿಗೆ ಇಸಿನೆತ ಹೇಳಿಕಂಡೊಳೊ. ಗಣಪತಿ ಹೋಮ ಹಾಕ್ಸಿದೆ. ಮೊನ್ನೆ ಗಣಪತಿಗೆ ಹಣ್ಣ್‌ಕಾಯಿ ಮಾಡ್ಸಿದೆ. ಹೆಂಗೇ ಆದರೂ ಅಲ್ಲೆಲ್ಲಾ ತೋಟ ಹೊಡಿ ಮಾಡ್ದ ಮೇಲೆ ಆನೆಗ ಇತ್ತ ಬಾರದೆ ಇರಿಕಿಲ್ಲೆತ ಆದೆ. ದೆವ್ವ ದೇವ್ರಿಗೆ ಕೊಡದಿದ್ದರೆ ಹೆಂಗಾದುತ ವರ್ಷೋಳು ಕೊಡ್ತಾ ಒಳೆ. ಬಾಳೆಗೊನೆಗಳ ಪೂರಾ ಕಪಿಗ ಹೊಡಿ ಮಾಡ್ತಾ ಒಳೊ. ಗೊನೆಲಿ ಕೂಂಬೆ ಮಾತ್ರ ಬಾಕಿ. ಕಾಡ್ ಹಂದಿಗ ಬಾಳೆನ ಮೊಗಚಿವೆ. ಕೆಸನ ಬುಡ ಒಂದೇ ಒಂದ್ ಬಾಕಿಯಿಲ್ಲೆ. ಈಗ ಮುಳ್ಳು ಹಂದಿಗಳ ಕಾಟ ಸುರಾವುಟು. ಗುಂಡ್ ಹೊಡೆಂಗಿಲ್ಲೆ. ಸದ್ದ್ ಗುಂಡ್‌ಗೆ ಕ್ಯಾರೇ ಮಾಡ್ತಾ ಇಲ್ಲೆ. ಮೊನ್ನೆ ಉಂಡೆ ಕ್ರಯಕೆ ನಮ್ಮ ಗಂಡ್ ಹಂದಿನ ಕೇಳಿಕೆ ಬಂದಿದ್ದೊ. ಅವ್ವ ಕೊಡ್ದು ಬ್ಯಾಡಾಂತೇಳ್ತ್. ಹಂಗಾಗಿ ಅದ್ರ ಕೊಟ್ಟತ್‌ಲೆ. ಕಾಗದ ತುಂಬ ಉದ್ದ ಆತ್. ಹೇಳಿಕೆ ತುಂಬ ಉಟ್ಟು. ನೀವೆಲ್ಲಾ ಒಮ್ಮೆ ಬಂದ್ ಹೋಗಿ. ಬಾಕಿ ಸಂಗತಿ ರೂಬು ರೂಬು ಮಾತಾಡ್ವೊ. ಮಕ್ಕಳಿಗೆ ನನ್ನ ಆಶೀರ್ವಾದಗ. ಇಂತಿ ಆಶೀರ್ವಾದ ಬೇಡುವ ನಿಮ್ಮ ತಮ್ಮ. ಹಿಂಗೆ ಆ ಕಾಗದ ಮುಕ್ತಾಯ ಆದೆ. ಆ ಕಾಗದಕ್ಕೆ ಉತ್ತರ ಬಾದು ಯಾಗೋ ಏನೊ? ಮೂರ್ ತಿಂಗ ಆರ್ ತಿಂಗಳ ಮುಟ್ಟ ಕಾಗದ ಬಾದರ ಕಾಯತಿದ್ದೊ.

**ಅಕ್ಕನ ಕಾಗದ :**

ಪ್ರೀತಿಯ ತಮ್ಮಂಗೆ ನಿನ್ನ ಅಕ್ಕನ ಆಶೀರ್ವಾದಗ. ಇಲ್ಲಿ ನಾವೆಲ್ಲ ತಕ್ಕ ಮಟ್ಟಿಗೆ ಆರೋಗ್ಯಲಿ ಒಳೊ. ನೀವೆಲ್ಲಾ ಸೌಖ್ಯಲಿ ಒಳರಿತ ನಿನ್ನ ಕಾಗದ ಓದಿ

ಗೊತ್ತಾತ್. ಚಾಮೆವ್ವ ಈಗ ಹೆಂಗೊಳೊ? ಕಠಿಣದ ಕೆಲ್ಸ ಮಾಡ್ದು ಬ್ಯಾಡಾತ ಅಪ್ಪಂಗೆ ಹೇಳ್. ನಿನ್ನ ಕಾಗದ ಬಂದ್ ತುಂಬಾ ಸಮೆ ಆತ್. ಉತ್ತರ ಬರೆದು ತಡಾ ಆತ್. ಪುರುಸೊತ್ತೇ ಆತ್ಲೆ. ಬರೆಕೆ ಕಾಗದನೂ ಇತ್ಲೆ. ಮೊನ್ನೆ ಭಾವ ಸಂತೆಗೆ ಹೋಗಿ ಬಾಕನ ಪೋಸ್ಟಾಫೀಸ್‌ಗಾಗಿ ದಾಟಿ ಬಂದೊ. ಹಂಗೆ ಬಾಕನ ಕಾಗದ ತಂದೊ.

ನಿನ್ನ ಮಕ್ಕ ಎಲ್ಲಾ ಪಾಸಾಗೊಳೊತ ಓದಿ ತಿಳ್ದ್ ಭಾರಿ ಕುಸೀ ಆತ್. ನಮ್ಮ ಮಕ್ಕ ಎಲ್ಲವೂ ಪಾಸಾಗೊಳೊ. ನಿನ್ನ ಮಕ್ಕಳ ಹಲ್ಲ್ ಬಗ್ಗೆ ಹಂಞ ಜಾಗ್ರತೆ ಮಾಡ್. ಕೊಂಬಟೆ ಮನಿ ಬಂದ್‌ಬುಡ್ದು. ನನ್ನ ನಾದಿನಿದ್ ಬಾಯಿ ಕೂಡ್ತ? ಕಡೇ ಜಾಡೆ ಹಲ್ಲ್ ಮೂಡಕನ ಜರ ಬಂದ್‌ಬುಟ್ಟದೆ. ನಿಮ್ಮಲ್ಲೀಗ ಮಳೆ ಬೆಳೆ ಹೆಂಗುಟ್ಟು? ನಮ್ಮಲ್ಲಿ ಮೊನ್ನೆ ನಾಕ್ ದಿನ ಮಳೆ ಕಣ್ಣ್ ಮುಚ್ಚಿ ಹೊಡ್ತ್. ಹಿಂದೆನ ಮಳೆಗೆ ಎರಡ್ ದಪ ಹೊಳೆ ಗದ್ದೆಗೆ ಹತ್ತಿತ್ತ್. ಆ ಗದ್ದೆದ್ ನಾಟಿ ಭಾರಿ ಲಾಯ್ಕ ಉಟ್ಟು. ಆದರೆ ತೋಡ್ ಮೊಗ್‌ದ್ ಕೊಕ್ಕೆ ಗದ್ದೆ ಒಡ್ದ್ ಹೋಗುಟು. ಸುಮಾರ್ ನಾಟಿ ಹೊಯಿಗೆಂದ ಮುಚ್ಚಿ ಹೋಗುಟು. ಸರಿ ಮಾಡ್ತಾ ಒಳೊ. ಪೂರ್ತಿ ಆತ್‌ಲೆ. ಎಸಂಡ್‌ಗಂತೂ ಪುಣಿನ ಮಾಳಿ ಮಾಡಿ ನೋಡಿಕಾದುಲೆ. ಮೊನ್ನೆ ಭಾವ ಹಂದಿ ಮರ್‌ಗಿಲ್ ಬಡ್ಚಕನ ಬಾಚಿ ತಾಂಗಿಸಿಕಂಡ್ ಕಾಲ್‌ಗೆ ಗಾಯ ಮಾಡಿಕಂಡೊಳೊ. ಕೆಲ್ಸ ಮಾಡಿಕೂ ಆದುಲೆ ಮಾಡದೆ ನಿಮೂರ್ತಿಯಿಲ್ಲೆ. ಹೇಳ್ದಂಗೆ ಗೋಣಿಕೊಪ್ಪ ದನದ ಸಂತೆಲಿ ಒಂದ್ ಎತ್ತ್‌ನ ತಕ್ಕಂಡೊ. ಭಾರೀ ಕ್ರಯಂತ! ಇನ್ನೂರ್ ರೂಪಾಯಿ ಆತ್. ಕಪ್ಪು ಪಟಯ ಎತ್ತ್. ಅದ್ ಸುರು ಸುರೂಗೆ ಪೆರ್ಚಿ ಪೆರ್ಚಿ ಆಡ್‌ತಿತ್ತ್. ಈಗ ಸಾಧು ಆಗುಟು. ಎತ್ತ್ ತೆಗೆಕ್ಕೇತೇಳಿ ದುಡ್ಡು ಜಕ್ಕರೆ ಮಾಡಿದ್ದೊ. ಎಷ್ಟೇ ಪೊತ್ತುರ್ತೆ ಮಾಡಿರೂಸನ ಎತ್ತುದುಲೆ. ಈ ವರ್ಷ ಹೆಂಗಾರ್ ಕಚಾಯಿಸಿಬುಟ್ರೆ ಮತ್ತೆ ಹೆಂಗಾರ್ ಆದೆ.

ಕರೆ ಫಸಲ್ ಇನ್ನ್ ಆಕು ಅಷ್ಟೆ. ಇಲಾತ್ ಬಳ್ಳಿಗೆ ಚೆರೆ ಕೊಟ್ಟಾತ್. ಮೆಣ್ಸ್ ಗಿಡಕ್ಕೆ ಮಣ್ಣ್ ಕೂಡಿಕುಟ್ಟು. ಎರಡ್ ಪಟ ಬೆಲ್ಲದ ಗೆಣ್ಸ್ ಬಳ್ಳಿ ಹಾಕೊಳೊ. ಹೊಳೆ ಮಾವ್ನಣ್ಣ್ ಫಸಲ್ ಈ ವರ್ಷ ಕಮ್ಮಿ ಆದರೂ ಅಲ್ಲಿ ಇಲ್ಲಿ ಹುಡ್ಕಿ ತಂದ್ ಹುಳಿ ನೀರ್ ಕಾಸಿದೆ. ನಾಕ್ ಕುಪ್ಪಿ ಆತ್. ಹುಣ್ಸೊಳಿ ನಾಲ್ಕೈದ್ ಮುದ್ದೆ ಇರೊಕು. ನಿಮ್ಮಲ್ಲಿ ಈ ವರ್ಷ ಪಣ್‌ಪುಳಿ ಫಸಲ್ ಹೆಂಗುಟ್ಟು? ಪಣ್‌ಪುಳಿದ್

ಕಾಚುಳಿದ್ ಮುಂದೆ ಯಾವ್ದೂ ಇಲ್ಲೆ. ಅದರ ತೊಪ್ಪೆಗೆ ಈಗ ರೇಟು ಹೆಂಗುಟ್ಟು? ನಾಕಾಣಿ ಸಿಕ್ಕಿರೆ ಅಷ್ಟಾರೂ ಆದೆಲ್ಲಾ? ಇಲ್ಲಿ ನಿಂಬುಳಿ ಬೇಕಷ್ಟ್ ಉಟ್ಟು. ಕೇಳವೇ ಇಲ್ಲೆ. ಕೆಲವ್ ಬೇವು ಬಂದ್ ಬಿದ್ದೋವುಟು. ಎಲ್ಲ ಹರ್ದಿಕಂಡ್ ಕರಗಿಕಂಡ್ ನೋಡಿಕಾಲೆ. ಮೊನ್ನೆಂದ ನಮ್ಮ ಕಂಟ ಕೊತ್ತಿ ಮನೆಗೆ ಬರ್ತಾ ಇಲ್ಲೆ. ಎಲ್ಲೋ ರೋಣು ಹೋಗಿರೊಕುತ ಕಂಡದೆ. ಅದ್ ಹಂಗೆಲ್ಲ ಹೋಗುವ ಕೊತ್ತಿಯಲ್ಲ. ಅದ್ ಹಂಗೆ ಹೋದರೂ ಬೆಳಗಾಕನ ಮನೆಲಿ ಇರ್ತಿತ್ತ್. ಎಲ್ಲಾರ್ ಗುಮ್ಮ ಮನಿ ಮೆಟ್ಟಿ ಬುಡ್ತೊ ಏನೊ?

ಇಲ್ಲಿ ಕಕ್ಕೆಗ, ಕಿರ್‌ಕೊಟ್ಟಗ, ಕೀರಿಗ, ಕುದ್ಕಗ ಪೆರ್ಪಣಗ ತುಂಬಿ ಹೋಗೊಳೊ. ಕೋಳಿ ಸಾಂಕುದೇ ಕಷ್ಟ ಆಗುಟು. ಮೊಟ್ಟೆ ಇಕ್ಕಿರೆ ಹಾಂವುಗ ನುಂಗಿ ಬುಟ್ಟವೆ. ಮೊನ್ನೆ ಕಾಪುಕಟ್ಟಿ ಹತ್ತ್ ಮೊಟ್ಟೆ ಇಸಿದ್ದೆ. ಕಾಪುಂದ ಹೇಂಟೆ ಹಾರಿತ್ತು. ಕಾಪುನ ನೋಣ್ಣೊತ ಹೋಗಿ ನೋಡ್ರೆ ಕೇರೆ ಹಾಂವು ಸುರುಟಿ ಮಲ್ಗಿತ್ತ್.

ಕಳ್ದ ಅರೆಗಾಲಲಿ ಅಂದರೆ ಬೇಸಗೆಲಿ ಕುಂಬಾರರ್ ಮಡ್ಕೆ ಹೊತ್ತ್‌ಂಡ್ ಬಂದಿದ್ದೊ. ನಾವ್ ಒಂದ್ ಅನ್ನದ ಮಡ್ಕೆನೂ, ಒಂದ್ ಹಾಲ್ ಅಳೆಗೆನೂ ತಕ್ಕಂಡೊ. ಹಬ್ಬ ಹಬ್ಬಕೆ ಬಳೆಗಾರ ಬಂದದೆ. ಹಾರಂವ ಗಂಧ ಪ್ರಸಾದ ತಕ್ಕಂಡ್ ಬಂದದೆ. ಹಬ್ಬ ಕಳ್ದಂಗೆ ವಾದ್ಯದವು ವಾದ್ಯ ಊದಿಕಂಡ್ ಮನೆ ಮನೆಗೆ ಬಂದವೆ. ಚವುರದಂವ ಬರದೆ ಮೂರ್ನಾಕ್ ತಿಂಗಾತ್.

ನಮ್ಮ ಮೇಲೆ ಮನೆ ಬೋಜಿ ಗೂಡೆ ಹೊಲೆ ಕಂಡುಟ್ಟು. ನೆರ್ದ ಮೊದುವೆಗೆ ನಾನ್ ಮತ್ತೆ, ನಮ್ಮ ಮಗಳು ಅಕ್ಕಯ್ಯ ಗೂಡೆ ಇಬ್ಬರು ಹೋಗಿದ್ದೊ. ಮತ್ತೆ, ನಮ್ಮ ರಾಣಿ ಅತ್ತಿಗೆ ಹೆತ್ತುಟು. ಎಣೆ ಮಕ್ಕ, ಎರ್ಡೂ ಹೆಣ್ಣ್ ಕೂಸುಗಳೇ. ಅಯ್ಯೆನ ಚೊಲ್ಲಿಕಂಡ್ ಹುಟ್ಟಿಯೊಳೊ. ಅಮೆ ಮಾಡಿ ಆತ್. ಬೆಳ್ಳುಳ್ಳಿ ಪಾಯ್ಸ ಮಾಡಿದ್ದೊ. ಅಕ್ಕಯ್ಯ ಗೂಡೆ ಪಾಯ್ಸನ ಅರ್‌ಗಿಸ್ ಉಂಡತ್‌ಲೆತ.

ಇಲ್ಲಿ ಕಾಡ್ ಪ್ರಾಣಿಗಳ ಉಪದ್ರ ಸುರಾವುಟು. ಸಧ್ಯ ನಮ್ಮದ್ ನಡೂ ಸಾಲ್ ಆದ್ದರ್‌ಂದ ಬಚಾವ್. ಕಾಡ್ ಕರೆಲಿರುವವರ ಗೋಳು ಹೇಳ್ದು ಬೇಡ. ಕೆಲವು ಸತಿ ನಡೂ ಸಾಲೋ ಕರೆ ಸಾಲೋ ಇರ್‍ಲ್ ಆಕನ ಆನೆಗ ನುಗ್ಗಿಬುಟ್ಟವೆ. ಯಾವ್ದಕೂ ಇರ್ಲಿಂತೇಳಿ ಬೆದ್ರ್‌ನ ಒಡ್ಡ್ ಉದ್ದದ ಸೂಟೆ ಮಾಡಿ ಇಸಿಕಂಡೊಳೊ. ಆನೆಗ ಮುರಿವ ಸದ್ದ್ ಕೇಳಕನ ಸೂಟೆನ ಹೊತ್ತ್‌ಸಿ ದೂರಕೆ ಕಾಂಬಂಗೆ ಎತ್ತಿ

ಹಿಡ್ದರೆ ಆನೆ ಮಾತ್ರ ಅಲ್ಲ ಯಾವ್ದೇ ಕಾಡ್ ಪ್ರಾಣಿಗಾದರೂ ಓಡಿಬುಟ್ಟವೆ. ಕೆಲವ್ ಜನ ಕಿಚ್ಚ್‌ನ ಕೊಳ್ಳಿನ ಬೀಸಿ ಅತ್ತ ಹೊಡ್ದವೆ. ಆನೆಗೆಲ್ಲಾ ಹೆದ್ರಿ ಓಡಿಬುಟ್ಟವೆ. ನೀನೂ ಸೂಟೆ ಕಟ್ಟಿ ಇಸಿಕ. ನಮ್ಮ ಈ ಕಡೆ ಆನೆ ಕಪ್ಪ ತೋಂಡಿಯೊಳೊ. ಒಂದ್ ಆನೆ ಕಪ್ಪದೊಳಗೆ ಬಿದ್ದಿತ್ತ್. ಅದರ ಹಿಡ್ದ್ ಆನೆ ಮಾವುತರ್ ಪಳ್‌ಗ್‌ಸ್ತಾ ಒಳೊ.

ರಜ ಸಿಕ್ಕಿದಂಗೆ ಮಕ್ಕಳ್ನ ಕಳ್ಸ್. ಒಂದ್ ಹತ್ತ್ ದಿನ ಇಲ್ಲಿ ಇರ್ಲಿ. ಭಾವ ನಿಮ್ಮಲ್ಲಿಗೆ ಹೊರ್ಟ್‌ಕಂಡೊಳೊ. ಪುರುಸೊತ್ತಾಕನ ಬಂದವೆ. ಕಾಗದ ಬರ್ಕಂಡಿರ್. ಚಾಮೆವ್ವ ಮತ್ತೆ ಅಪ್ಪನವರ್‌ಂದ ಆಶೀರ್ವಾದ ಬೇಡಿಕಣೆ. ನಾದಿನಿ ಮತ್ತೆ ಮಕ್ಕಳಿಗೆ ನನ್ನ ಆಶೀರ್ವಾದಗ.

ಇಂತಿ ಆಶೀರ್ವಾದ ಮಾಡುವ

**ನಿನ್ನ ಅಕ್ಕ.**

ಇದೊಂದ್ ಮಾದರಿ ಕಾಗದ. ಹಿಂದೆಂತೇಳ್ರೆ ಹತ್ತೈವತ್ತ್ ವರ್ಷಗಳ ಹಿಂದೆ ಇದೇ ರೀತಿ ಕೆಲವ್ ಕಾಗದ ಬರೆತಿದ್ದೊ. ಮತ್ತೆ ಕೆಲವು ಬರೀ ವ್ಯವಹಾರಕ್ಕೆ ಸಂಬಂಧಪಟ್ಟಂಗೆ ಕಾಗ್ದ ಬರೆತಿದ್ದೊ. ಅಂದ್‌ನವರ ಅಕ್ಷರ, ಬರವಣಿಗೆ ರೀತಿ ಇಂದ್ ವಿಶೇಷತ ಕಂಡದೆ. ವಸ್ತುಗಳ ಬೆಲೆನೂ ಹಂಗೆ. ಬರೀ ತೂತು ಕಾಸ್ ಆಣೆ ಪೈಸಂತೆಲ್ಲಾ ವ್ಯವಹಾರಕ್ಕೆ ಉಪಯೋಗಿಸ್ತಿದ್ದೊ. ಒಂದು ರೂಪಾಯಿ, ಐದು ರೂಪಾಯಿ, ಹತ್ ರೂಪಾಯಿ ಇದೆಲ್ಲಾ ಭಾರೀ ದೊಡ್ಡ ದುಡ್ಡು. ಒಂದು ರೂಪಾಯಿಗೆ ನಾಲ್ಕ್ ತೆಂಗ್‌ನಕಾಯಿ, ಪಾವ್‌ಲಿಗೆ ಮೂರ್ ಬಾಳೆಹಣ್ಣ್ ಸಿಕ್ಕ್‌ತಿತ್. ಪಾವ್‌ಲಿಂತೇಳ್ರೆ ನಾಲ್ಕಾಣೆ. ಒಂದ್ ಕಿಲೊ ಮಾಸಕ್ಕೆ ನಾಕೈದ್ ರೂಪಾಯಿ ಇರ್ತಿತ್. ಕೆಲ್ಸದವ್ರ ಸಂಬಳ ದಿನಕ್ಕೆ ಒಂದೂವರೆ ಎರ್ಡ್ ರೂಪಾಯಿ. ಇಂಥ ಹಳೆ ವಿಚಾರನ್ನೆಲ್ಲಾ ಎಪ್ಪತ್ತ್ ಎಂಬತ್ತ್ ವರ್ಷ ವಯಸ್ಸಾದ ನಮ್ಮ ಹಿರಿಯವ್ರ ಕೇಳ್ರೆ ಅವು ತಮ್ಮ ಅನುಭವನ ಹೇಳಿಕಂಡವೆ. ಅಂಥಾ ಹಿರಿಯವ್ರನ್ನ ಮಾತಾಡ್ಸೊಕು ಅವರ್‌ಂದ ಇನ್ನೆಂತಾದೆತ ಉದಾಸಿನ ಮಾಡಿಕಾಗದ್. ಅತೀ ಅಮೂಲ್ಯವಾದ ವಿಷಯಗಳ್ನ ಅಂತವರ್‌ಂದ ಕೇಳಿ ತಿಳ್ಕಂಬ ಜವಾಬ್ದಾರಿ ಯುವ ಜನಾಂಗದ ಮೇಲುಟ್ಟು. ಆ ಎಲ್ಲಾ ಹಿರಿಯವರ ಪಾದಾರವಿಂದಗಳಿಗೆ ಸಾಷ್ಟಾಂಗ ಪ್ರಣಾಮಗ.

* * * * *

# ತೋಡು ಕರೆಲಿ ಗುಡ್ಡ, ಅಂಗ್ಡಿ ಕರೆಲಿ ದರ್ಜಿ

ಬಚ್ಚಲ್ ಮನೆನ ಗುಡ್ಡತೇಳಿವೆ. ಹಿಂದೆಲ್ಲಾ ಗುಡ್ಡ ಮನೆಂದ ದೂರಲಿ ಇರ್ತಿತ್. ಗದ್ದೆ ಕರೆಲೋ, ತೋಡ್ ಕರೆಲೊ ಇಲ್ಲರೆ ಬಾಮಿ ಕರೆಲೊ ಗುಡ್ಡ ಕಟ್ಟ್‌ತ್ತಿದ್ದೊ. ಸುತ್ತ ಗೋಡೆ, ಇಲ್ಲರೆ ಎಂತಾರ್ ಮರೆ ಕಟ್ಟ್‌ತಿದ್ದೊ. ಹುಲ್ಲ್‌ದ್ ಮಾಡ್ ಇರ್ತಿತ್ತ್. ದೊಡ್ಡ ಒಲೆ ಮಾಡಿ, ಆ ಒಲೆಗೆ ತಕ್ಕಂಗೆ ತಾಮ್ರದ ದೊಡ್ಡ ಹಂಡೆನ ಇಸ್‌ತಿದ್ದೊ. ಎಂಟತ್ತ್ ಬಿಂದಿಗೆ ನೀರ್ ಹಿಡೆತಿತ್ತ್. ಅಲ್ಲಿ ಇಲ್ಲಿ ಬಿದ್ದ ಬೆದ್ರ್, ಚರಂಬು, ಕೊಂಬೆಗಳ್ನ ಎಳ್ಕಂಡ್ ಬಂದ್ ಒಲೆಗೆ ಹಾಕ್‌ತಿದ್ದೊ. ಕುಂಟೆಗಳ್ನ ತಂದ್ ಹಾಕಿರಂತೂ ನಾಕಾರ್ ದಿನ ಬಾತಿತ್. ಅಂದೆಲ್ಲಾ ಸಾಮಾನ್ಯಾಗಿ ಯಾಗೋಳು ಮೀಯುವ ಪದ್ಧತಿ ಇತ್ತ್‌ಲೆ. ಹೊರಗೆದ್ ಕೆಲ್ಸನೆಲ್ಲಾ ತೀರ್ಸಿಕಂಡ್ ಬಂದ್ ಕೋಳಿ ಮುಚ್ಚಿ, ನಾಯಿ ಬುಟ್ಟ್, ದನಗಳಿಗೆ ಹುಲ್ಲ್ ಹಾಕಿ ಇದೆಲ್ಲಾ ಆದ ಮೇಲೆ ಕಾಲ್ ಕೈ ಮುಖ ತೊಳ್ದ್ ಒಳಗೆ ಬಾತಿದ್ದೊ. ಮತ್ತೆ ದೇವ್ರ ದೀಪ ಬೆಳ್‌ಗ್ತ್ತಿದ್ದೊ. ಶಂಖ ಊದ್‌ತ್ತಿದ್ದೊ. ಭಸ್ಮ ಹಾಕಿದ ಮೇಲೆ ಮಕ್ಕ ಭಜನೆ, ಶ್ಲೋಕ, ಮಗ್ಗಿ ಬಾಯಿಪಾಠ ಹೇಳ್ತಿದ್ದೊ. ಮತ್ತೆ ಅಪ್ಪ ಮಕ್ಕ ಎಲ್ಲಾ ಒಟ್ಟಿಗೆ ಉಂಬಕೆ ಕೂರ್ತಿದ್ದೊ. ಅವ್ವ ಕಡೇಲಿ ಊಟ ಮಾಡ್ತಿತ್ತ್. ಮಕ್ಕ ಓದಿ ಬರ್ದ್ ನಿಲ್‌ಗಿಕೆ ಹೋತಿದ್ದೊ. ಅಂತೂ ಬಹಳಷ್ಟ್ ಮನೆಗಳ್‌ಲಿ ಇರ್ಲ್ ಎಂಟ್ ಎಂಟೂವರೆಗೆಲ್ಲಾ ಮಲ್ಗಿ ಬುಡ್ತಿದ್ದೊ. ಅಂದ್ ಬೇಗ ಮಲ್ಗಿ, ಬೇಗ ಏಳುವ ಪದ್ಧತಿ ಇತ್ತ್. ಕಾಡ್ ಕರೆಲಿ ಮನೆ ಇದ್ದವುಕ್ಕಂತೂ ಕಾಡ್ ಪ್ರಾಣಿಗಳ ಕೂಗಾಟ ಕೇಳ್ತಿತ್ತ್. ಚಂಗ ಹಾಕ್‌ವ ಕಡವೆ, ಕೂಗು ಹಾಕುವ ಸಾರಗ, ಕಿರುಚುವ ಕುರೇಂಗಿ, ಹುಲಿಗಳ ಆರ್ಭಟ, ಕೊಂಬು ಹಿಡಿವ ಆನೆಗ, ಗುಮ್‌ಗುಟ್ಟುವ ಪಾಂಜ,

ಹೂಂಗುಟ್ಟುವ ಗುಮ್ಮ, 'ಉಪ್ಪು ಟೀಂಟಿ'ತ ಕೂಗಾಟ ಮಾಡುವ ಉಪ್ಪು ಟೀ ಟೀ ಹಕ್ಕಿಗಳ ಕೂಗು ಇವೆಲ್ಲ ಯಾಗೋಳು ಕೇಳುವ ಸದ್ದ್ ಅಲ್ಲರೂ ಯಾವುದಾರೂ ಒಂದ್ ಪ್ರಾಣಿ ಕೂಗುವ ಸದ್ದ್ ಕೇಳ್ತಿತ್ತ್.

ಹಿಂದೆಲ್ಲಾ ತರತರದ ಸಾಬೂನ್ ಇತ್ಲೆ. 808 ತೇಳ್‌ವ ಬಟ್ಟೆ ಸಾಬೂನ್ ಆಗ ಭಾರಿ ಹೆಸ್ರ್‌ವಾಸಿಯಾಗಿದ್ದ ಸಾಬೂನು. ಆದರೆ ಇಡೀ ಬಾರ್ ಸೋಪುನ ತಾತಿತ್ಲೆ. ಎರ್‌ಡ್ ಗೀಟ್, ಮೂರು ಗೀಟ್‌ಂತ ಗೀಟ್ ಲೆಕ್ಕಲಿ ಸಾಬೂನ್ ತಾತಿದ್ದೊ. ಬಟ್ಟೆಗೂ ಅದೇ ಮೀಂಯುಕ್ಕೂ ಅದೇ ಸಾಬೂನ್‌ನ ತುಂಬ ಜನ ಉಪಯೋಗ್‌ಸ್ತಿದ್ದೊ. ಗಮ್ ಗಮಾತ್ತೇಳುವ ಸಾಬೂನು ಉಟ್ಟುತ್ತೇಳ್ದು ಗೊತ್ತೇ ಇತ್ತ್‌ಲೇಂತೇಳಿರೆ ತಪ್ಪಾಕಿಲೆ. ಹಂಗಾಗಿ ಸೀಗೆನ ಕುಟ್ಟಿ ಹೊಡಿ ಮಾಡಿ ಡಬ್ಬಿಗೆ ಹಾಕಿ ಇಸಿಕಂಬತಿದ್ದೊ. ಸೀಗೆ ಹೊಡಿ ತರಿ ತರಿ ಇರ್ತಿತ್. ಅದರ್ನ ಹಾಕಿ ಮೀದರೆ ಎಣ್ಣೆ ಪಸೆ ಇರ್ತಿತ್‌ಲೆ. ಆಗೆಲ್ಲಾ ತಲೆಗೆ ಹರಳೆಣ್ಣೆ ಹಾಕ್‌ತಿದ್ದೊ. ಸೀಗೆಗೆ ಎಣ್ಣೆ ಪಸೆ ಮನಾರ ಹೋತಿತ್ತ್. ಮೈ ಉಜ್ಜಿಕೆ ಹೀರೆಕಾಯಿ ಚೇರಿ ಭಾರೀ ಲಾಯ್ಕ ಆತಿತ್. ಕತ್ತಲಾಕನ ಗುಡ್ಡಕ್ಕೆ ಹೋಗಿ ಮೀದ್ ಬಾಕನ ದೊಂದಿ ಹೋಸಿಕಂಡ್ ಬಾತಿದ್ದೊ. ನೀರ್ ಹಂಡೆ ಗುಡ್ಡಲೇ ಇರ್ತಿತ್. ಕುಂಟೆನ ಎಳ್ದ್ ಅದ್ಕೆ ನೀರ್ ಹೊಯ್ದ್ ಕೆಡ್ಸ್‌ತಿದ್ದೊ. ಒಲೆಲಿ ಬೂದಿ ಜಾಸ್ತಿ ಆತಿದ್ದಂಗೆ ಅದರ್ನೆಲ್ಲ ಎಳ್ದ್ ಒಂದೋ ಕೆಸನ ಬುಡಕ್ಕೆ, ಇಲ್ಲರೆ ಬಾಳೆ ಬುಡಕ್ಕೆ ಹಾಕ್‌ತ್ತಿದ್ದೊ.

ಕಾಲ ಕಳ್ದಂಗೆ ಗುಡ್ಡಲೇ ಬುಡ್ತಿದ್ದ ಹಂಡೆನ ಅಲ್ಲೇ ಬುಡ್ದು ಕಮ್ಮಿ ಆತ್. ಯಾಕೆಂತೇಳ್ರೆ ಬೆಲೆಬಾಳುವ ತಾಮ್ರದ ಹಂಡೆನ ಕದಿಯಕೆ ಸುರು ಮಾಡ್ದೊ. ಹಂಗಾಗಿ ಹಂಡೆನ ಮನೆಂದ ಹೊತ್ತ್‌ಕಂಡ್ ಹೋಗಿ, ನೀರ್ ಕಾಸಿ ಮೀದೆಲ್ಲಾ ಆದ ಮೇಲೆ ಹಿಂದಕ್ಕೆ ತಂದ್‌ಬುಡ್ತಿದ್ದೊ. ಮಳೆಗಾಲಲಿ ಮೀಯಕ್ಕೆತೇಳಿ ಗುಡ್ಡಕ್ಕೆ ಹೋತಿದ್ದದ್ ಕಮ್ಮಿ. ಮನೆಲೇ ಕಾಸಿಕಂಡ್ ಅಲ್ಲೇ ಜಗಲ್ ಕರೆಲಿ ಮೀದ್ ಹತ್ತ್‌ತ್ತಿದ್ದೊ.

ಬಟ್ಟೆ ಒಗೆಕೇತ ತಂದ ಸಾಬೂನ್‌ನ ಭಾರೀ ಎಚ್ಚರಂದ ಉಪಯೋಗ ಮಾಡ್ತಿದ್ದೊ. ನೀರ್‌ಗೆ ಬೂದಿನ ಹಾಕಿ ಅದೇ ಪಾತ್ರೆಗೆ ಬಟ್ಟೆನ ಹಾಕಿ ಲಾಯ್ಕ ಪದ್‌ನ್‌ಸ್ತಿದ್ದೊ. ಮತ್ತಿ ಮರದ ಬೂದಿ ಭಾರೀ ಲಾಯ್ಕ ಆತಿತ್. ಅದ್‌ಕಿಂತ ಇನ್ನೂ ಲಾಯ್ಕ ಆತಿದ್ದದ್ ಕಾರೆ ಕಾಯಿ. ಕಾರೆ ಕಾಯಿಲಿ ಎರಡ್ ತರ ಉಟ್ಟು.

ಬುಗುರಿಯಂಗೆ ಇರುವ ಕಾಯಿ ಭಾರೀ ಖಾರ. ಬೆಳ್ದ ಕಾಯಿನ ಗುದ್ದಿ ನೀರಿಗೆ ಹಾಕಿ ಕೈಂದ ಲಾಯ್ಕ ತಿರ್‌ಗ್‌ಸೊಕು. ಆಗ ನೊರೆ ಬಂದದೆ. ಅದೇ ಪಾತ್ರೆಗೆ ಬಟ್ಟೆನ ಹಾಕಿ ಪದ್‌ನಿಸಿ ಒಗ್ದರೆ ಜಿಡ್ಡ್ ಲಾಯ್ಕ ಹೋದೆ. ಹಿಂಗೆ ಬೂದಿನೋ ಇಲ್ಲರೆ ಕಾರೆಕಾಯಿನೊ ಸಾಬೂನ್ ಬದಲಿಗೆ ಉಪಯೋಗ್‌ಸ್‌ತ್ತಿದ್ದ ಕಾಲ ಅದ್.

ಬೇಸಗೆಲಿ ಬಟ್ಟೆ ಒಗೆಕೆ ಹೊಳೆಗೊ, ಕೆರೆಗೊ ಇಲ್ಲರೆ ತೋಡ್‌ಗೋ ಹೋತಿದ್ದೊ. ಒಗೆಕಿರುವ ಬಟ್ಟೆನೆಲ್ಲಾ ಒಂದ್ ದೊಡ್ಡ ಗಂಟ್ ಕಟ್ಟಿಕಂಡ್ ಹೊತ್ತ್‌ಕಂಡ್ ಹೋತಿದ್ದೊ. ಬಟ್ಟೆನೆಲ್ಲಾ ಒಗ್ದ್ ಹುಲ್ಲ್, ಇಲ್ಲರೆ ಹೊಯಿಗೆ ಮೇಲೆ ಒಣಂಗಿಕೆ ಹಾಕ್‌ತಿದ್ದೊ. ಹಿಂಗೆ ಒಣಂಗಿಕೆ ಹಾಕಿದ ಮೇಲೆ ತೋಡ್ ಕರೆಲಿರ್‌ತಿದ್ದ ಕೆಸನ ಚಿರಿನೋ, ಚರ್ಮೆ ಕೊಡಿನೋ, ಇಲ್ಲರೆ ವನಗನ ಸೊಪ್ಪು ತುದಿನೋ ಕೊಯ್ಯಿತಿದ್ದೊ. ಅಷ್ಟರಲ್ಲಿ ಬಟ್ಟೆ ಒಣಂಗಿರ್‌ತಿತ್ತ್. ಮತ್ತೆ ಬಟ್ಟೆನೆಲ್ಲಾ ಕೊಡ್ಕಿ ಗಂಟ್ ಕಟ್ಟಿಕಂಡ್ ಮನೆ ಕಡೆ ಹೊರ್ಡ್‌ತ್ತಿದ್ದೊ. ಆಗೆಲ್ಲಾ ಇಸ್ತ್ರಿ ಮಾಡಿಕೆ ಇಸ್ತ್ರಿಪೆಟ್ಟಿಗೆ ಇರ್‌ತಿದ್ದದ್ ಕಮ್ಮಿ. ಹಂಗಾಗಿ ಬಟ್ಟೆನ ಲಾಯ್ಕ ಮಡ್ಚಿ ತಲೆಗಡಿ ಕೆಳಗೆ ಮಡ್ಗಿ, ಮಲ್ಗಿ ಬೆಳಿಗ್ಗೆ ಎದ್ದ್ ಬಟ್ಟೆನ ನೋಡಿರೆ ಒಂದ್ ನಮೂನೆ 'ಇಸ್ತ್ರಿ' ಮಾಡ್ದಂಗೆ ಇರ್ತಿತ್. ಸಾಮಾನ್ಯಾಗಿ ವರ್ಷಕ್ಕೆ ಒಮ್ಮೆ ಹೊಸಾ ಬಟ್ಟೆ ಹೊಲ್ಸುದು ಪದ್ಧತಿ. ಅದರ್‌ಲೂ ಹುತ್ರಿ ಹಬ್ಬಕ್ಕೆ ಬಟ್ಟೆ ಹೊಲ್ಸುದು ವಿಶೇಷ.

ಊರೊಳಗೆ ಒಂದ್ ಅಂಗ್ಡೀಂತ ಇದ್ದರೆ ಆ ಅಂಗ್ಡಿ ಕೈಯ್ಯಾಲೆ ಕರೇಲಿ ಒಬ್ಬ ದರ್ಜಿ ಕುದ್ದರೆ ಅದ್ ಆ ಊರ್ದ್ ಪುಣ್ಯಂತೇಳಕ್. ಅಂಗ್ಡಿಂತೇಳ್ರೆ ಬರೀ ಅಂಗ್ಡಿ ಮಾತ್ರ ಅಲ್ಲ, ಒಂದ್ ಕಡೆ ಚಾಯ ಕಡಿ ಕೊಡುವ ಹೋಟಲೂ ಇದ್ದದೆ. ಚಾಯ ಕಾಸ್‌ತಿದ್ದ ಒಲೆ ಎತ್ತರಲಿ ಇರ್ತಿತ್. ಆ ಎತ್ತರ ಒಲೆ ಮೇಲೆ ಎತ್ತರದ ಒಂದು ಸಪೂರದ ಪಾತ್ರ. ಆ ಪಾತ್ರಲಿ ಕೊಂಯ್ಯಿಂತೇಳಿ ಸದ್ದ್ ಮಾಡಿಕಂಡ್ ನೀರ್ ಕುದಿವ ಸದ್ದ್ ಕೇಳ್ತಿತ್ತ್. ಆ ಪಾತ್ರದ ಕೆಳಗೆ ಲಟಲಟ ಸದ್ದ್ ಮಾಡಿ ಬೂದಿನ ಬೀಳ್‌ಸ್ತಿದ್ದೊ. ಆ ಪಾತ್ರೆಲಿ ಒಂದ್ ಕಡೆ ಟೀ ಪುಡಿನ ಬೇಸ್‌ತ್ತಿದ್ದ ಒಂದ್ ವ್ಯವಸ್ಥೆ ಇರ್ತಿತ್. ಹಂಗೆ ಮಾಡಿ ಕೊಡ್ತಿದ್ದ ಟೀಗೂ ಈಗ ಹಿಂಗೆ ಮಾಡಿಕೊಡುವ ಟೀಗೂ ಭಾರೀ ವ್ಯತ್ಯಾಸ ಉಟ್ಟು. ರುಚಿ ಮತ್ತೆ ವಾಸನೆಲೂ ವ್ಯತ್ಯಾಸ ಉಟ್ಟು. ಕುತ್ತಿ ಪುಟ್ಟ್ ಇಲ್ಲರೆ ಬೇಸಿದ ಮರಗೆಣ್‌ಸ್‌ನ ಕಡೀಂತ ತಿಂಬಕೆ ಕೊಡ್ತಿದ್ದೊ. ಹ್ಹಾ! ಅದೆಲ್ಲಾ ಇರ್‌ಲಿ, ಹೊರಗೆ ಕುದ್ದ ದರ್ಜಿ ಆ ಊರಿಗೆ

ಹೆಸ್ರ್‌ವಾಸಿ. ಆ ದರ್ಜಿ ಬಟ್ಟೆ ಕತ್ರ್‌ಸಿ ಬೇಡಾದ ಬಟ್ಟೆ ಚೂರ್‌ನೆಲ್ಲಾ ದಾರಿ ಕರೆಲಿ ಗುಡ್ಡೆ ಹಾಕ್‌ತಿತ್ತ್. ಇಸ್ಕೂಲ್ ಮಕ್ಕ ಅದರ್‍ಲ್ಲೂ ಗೂಡೆಗ ಆ ಬಟ್ಟೆ ಚೂರ್‌ಗಳ್‌ಲಿ ಜಡೆ ಬಟ್ಟೆ ಸಿಕ್ಕುದಾತ ಹುಡ್ಕ್‌ತ್ತಿದ್ದೊ. ಜಡೆ ಬಟ್ಟೆಂತೇಳ್ರೆ ರಿಬ್ಬನ್. ಒಂದಷ್ಟ್ ಉದ್ದದ ಬಟ್ಟೆ ಸಿಕ್ಕಿರೆ ಗೂಡೆಗ ಕೊಣ್ದಾಡ್‌ತ್ತಿದ್ದೊ. ಅಂಗೈ ಅಗಲದ ಬಟ್ಟೆ ಸಿಕ್ಕಿರೆ ಚೌಕಂತ ತಕ್ಕಂಬತಿದ್ದೊ.

ಆ ದರ್ಜಿ ಹತ್ರ ಬಟ್ಟೆ ಕೊಟ್ಟ್, ಅಳ್ತೆಕೊಟ್ಟ್, ಬಟ್ಟೆ ಯಾಗ ಸಿಕ್ಕುದುತ ಕೇಳ್ರೆ ಒಂದ್ ಹತ್ತ್ ದಿನ ಕಳ್ದ್ ಬಾಕೆ ಹೇಳ್ತಿತ್ತ್. ಹತ್ತ್ ದಿನ ಬುಟ್ಟ್ ಹೋದರೆ ಬಟ್ಟೆನ ಮುಟ್ಟೇ ಇರ್ದುಲೆ. ಮತ್ತೆ ವಾರ ಕಳ್ದ್ ಹೋದರೆ ಕೊಟ್ಟ ಬಟ್ಟೆಲಿ ಯಾವ್ದಾರ್ ಒಂದರ ಮಾತ್ರ ಕತ್ರಿಸಿದ್ದದೆ ಅಷ್ಟೆ. ಇನ್ನೊಮ್ಮೆ ಹೋದರೆ ಆ ಇನ್ನೊಂದರ್ನ ಕತ್ರಿಸಿದ್ದದೆ. ಇನ್ನ್ ಹೊಲೆದು ಯಾಗೊಳೋ ಏನೊ? ಒಮ್ಮೆ ಬ್ಯಾಗ ಹೊಲ್ದ್ ಕೊಡಿಯಪ್ಪಾಂತೇಳ್ರೆ, ಆತ್ ನೀವ್ ಬಟ್ಟೆಗೆಂತ ಬಾದು ಬೇಡ. ನಾನೇ ಆ ಕಡೆ ಬನ್ನೆಂತೇಳಿ ಕಳ್ಸ್‌ತಿತ್ತ್. ಅಲ್ಲಿ, ಮನೆಲಿ ದಾರಿ ಕಾದದೇ ಬಾತ್. ಹಿಂಗೆ ಬುಟ್ರೆ ಆಕಿಲೆಂತ ಪುನಾ ದರ್ಜಿ ಹತ್ರ ಹೋದರೆ ಶರ್ಟ್‌ದ್ ಕೈ, ಸುರಾಲ್‌ದ್ ಕಾಲ್ ಮಾತ್ರ ಹೊಲೆಕಿರ್ದು. ನಾಳೆ ಖಂಡಿತ ಕೊಟ್ಟನೇಂತೇಳ್ದೆ. ಇನ್ನೊಂದಿನ ಹೋದರೆ ದರ್ಜಿ ನಾಪತ್ತೆ! ಅಂಗಡಿಯಂವನ ಕೇಳ್ರೆ ಅಂವ ಸಂತೆಗೆ ಹೋನೆತ ಹೋತು. ನೂಲುಂಡೆ ಮತ್ತೆ ಕೊಂಡಿ ತರೋಕುಂತೇಳ್ತಿತ್‌ತ ಹೇಳ್ದೆ. ಅಂತೂ ಇಂತೂ ಒಂದ್ ತಿಂಗ ಕಳ್ದ ಮೇಲೆ ಬಟ್ಟೆ ಸಿಕ್ಕ್‌ತಿತ್ತ್. ಹಿಂದೆಲ್ಲಾ ರೆಡಿಮೇಡ್ ಬಟ್ಟೆ ಇರ್ತಿದ್ದದ್ ಕಮ್ಮಿ. ಹಂಗಾಗಿ ಬಟ್ಟೆ ಹೊಲ್ಸಿಯೇ ಹಾಕಕಾಗಿತ್ತ್. ರೆಡಿಮೇಡ್ ಬಟ್ಟೆ ಇದ್ದರೂಸನ ಅದರ್ನ ಅಷ್ಟ್ ಖಾಯಸ್ ಪಡ್ತ್‌ತಿತ್ತ್‌ಲೆ. ಅದ್ ಸತ್ತವರ ಮೈಮೇಲಿದ್ದ ಬಟ್ಟೆ ಗಡ. ಅಂತದರ ಹಾಕಿಕಾಗದ್‌ಂತೇಳುವ ಕಮ್ಮಿ ತಿಳುವಳಿಕೆ ಇದ್ದ ಕಾಲ ಅದಾಗಿತ್ತ್.

* * * * *

# ಕಕ್ಕೆ–ಕಣ್ಣ್–ಹದ್ದ್

ರೈತಂಗೆ ಗದ್ದೆನೇ ಮುಖ್ಯ ಆಗಿತ್ತ್. ಬತ್ತದ ಬೆಳೆ ಮುಂದೆ ಮತ್ತೆಂತನೂ ಬೇಕಾಗಿತ್ಲೆ. ಮನ್ಸ್ ಬಂದಂಗೆ ಎಲ್ಲವ್ ಕಾಫಿ ಗಿಡನೂ ನೆಡುವಂಗೆ ಇತ್ಲೆ. ಅದ್ಕೂ ನೀತಿ ನಿಯಮ ಇತ್ತ್. ಕಂದಾಯ ಜಾಗೆ ಅಲ್ಲದಲ್ಲಿ ಕಾಫಿ ಗಿಡ ನೆಟ್ಟರೆ ಅದರ್ನ ಸರಕಾರ ಕಡ್ದ್ ಹಾಕ್‌ತಿತ್ತ್. ಹಂಗಾಗಿ ಬತ್ತ ಬೆಳೆನೇ ನಂಬಿಕಂಡಿದ್ದ ಕಾಲ ಅದ್. ವರ್ಷಕ್ಕೆ ಒಂದ್ ಬೆಳೆ ಬೆಳ್ಕಂಬತ್ತಿದ್ದೊ. ಆರ್ ತಿಂಗ ಬೆಳೆ, ಮತ್ತೆ ಆರ್ ತಿಂಗ ಗದ್ದೆ ಪಾಳ್ ಬಿದ್ದಿರ್‌ತಿತ್ತ್. ಮನೆಂದ ನೋಡ್ರೆ ಗದ್ದೆ ಕಾಂಬಂಗಿರೊಕು. ಹಂಗೇ ಗದ್ದೆ ಹತ್ರನೇ ಮನೆ ಕಟ್ಟಿಕಂಬತಿದ್ದೊ.

ಊರೊಳಗಿರುವ ಮನೆಗೆ ದೂರನೋ ಕೇಳ್ದೇಬ್ಯಾಡ. ಬಸ್ಸ್ ಇಳ್ದ್ ನಡ್ದರೆ, ನಡ್ದ್ ನಡ್ದ್ ಸಾಕ್‌ಬೇಕಾತಿತ್. ಆ ದಾರಿನೋ, ಸಣ್ಣ ಕಾಲ್ ದಾರಿ. ಒಬ್ಬನ ಹಿಂದೆ ಮತ್ತೊಬ್ಬ ನಡೆಕಲ್ಲದೆ, ಇಬ್ಬರು ಒಮ್ಮೆಗೆ ಅಡ್ಡಡ್ಡಾಗಿ ನಡೆಕೆ ಆಕೇಲೆ. ಇಷ್ಟೇ ಇಷ್ಟಗಲದ ಕಾಲ್ ದಾರಿ. ಒಂದ್ ಪಾದ ಇಸಕ್. ಅಷ್ಟ್ ಸಣ್ಣದಾರಿ. ಕಾಲ್ ಮನಿ ತಪ್ಪಿರೆ ಪಾತಾಳ! ಕಾಲ್‌ಗೆ ದರ್ಪಾಟ ಬಾದು. ಅಂತಾ ದಾರಿ ಹಿಡ್ದ್ ಮುಂದೆ ಹೋದರೆ ಮುಂದೆ ಒಂದು ತೋಡು. ಆ ತೋಡು ಇಳ್ದ್, ಆಚೆ ಕರೆಗೆ ದಾಟಿ, ಕಡಕ್‌ಲ್ ಹತ್ತಿ ಇಳ್ದ್ ಯಾರ್ದೋ ಗದ್ದೆ ಪುಣಿಗಾಗಿ ಹೋಗಿ, ಏಲಕ್ಕಿ ತೋಟದ ಒಳಗೆ ನಡ್ದ್, ಕಾಡ್‌ದಾಟಿ, ಹಟ್ಟಿ ಕರೇಗಾಗಿ ಹೋದರೆ ಓ ಅಲ್ಲಿ ಕಂಡದಲ್ಲ, ಅದೇ ಮನೆ.

ಅರೆ! ಆ ಮನೆ ಹಂಚಿ ಹಾಕಿದ ಮನೆ. ಮಚ್ಚಿಪಾರ್ (ಮುಚ್ಚುಪಾರ್?) ಹಾಕಿದ ಬೆಚ್ಚಂಗಿರುವ ಮನೆ. ನೆಲಕ್ಕೆ ಸಿಮೆಂಟ್ ಹಾಕೊಳೊ. ಮಣ್ಣ್‌ದ್ ಗೋಡೆಗೆ ಸಿಮೆಂಟ್‌ದ್ ಸಾರಣೆ ಆಗುಟು. ಕಾಡ್‌ಕಲ್ಲ್ ತೋಡ್‌ಕಲ್ಲ್‌ಂದ ಅಂಗಳಕೆ ಕಕ್ಕಟ್ಟ್

ಕಟ್ಟಿಯೊಳೊ. ಅಲ್ಲಾ, ಒಬ್ಬಂಗೆ ಸರಿಯಾಗಿ ನಡೆಕೇ ದಾರಿಯಿಲ್ಲೆ. ಹಂಗಿರಕನ ಇಂಥಾ ಮನೆನ ಹೆಂಗೆ ಕಟ್ಟಿದರಿತ ಕೇಳ್ರೆ, "ಅದೆನಿ, ನೀವ್ ನಡ್ದ್ ಬಂದ ದಾರಿ ಉಟ್ಟಲ್ಲ, ಅದೇ ದಾರಿಗಾಗಿ ನೋಡಿ ಈ ಹಂಚಿ, ಸಿಮೆಂಟ್‌ನೆಲ್ಲಾ ತಲೆ ಹೊರೆಲಿ ಹೊತ್ತ್ ತಂದದ್‌ತ" ಹೇಳಿವೆ. ಹೌದು, ಕೊಡಗ್‌ನ ಹಲವ್ ಕಡೆ ಇದೇ ಸ್ಥಿತಿ ಆಗ ಇದ್ದದ್. ಯಾವ ವಾಹನಗಳ ಓಡಾಟಕ್ಕೂ ಆಸ್ಪದ ಇತ್ತ್‌ಲೆ. ಆದರೂ ಅಂದ್‌ನವ್ರ ಸಾಮರ್ಥ್ಯ ಮಾತ್ರ ಕೊಂಡಾಡುವಂತದ್ದೇ. ತೋಟದ ಮತ್ತೆ ಗದ್ದೆ ಸುತ್ತೆಲ್ಲಾ ಕಾಡ್ ಕಲ್ಲ್‌ದೇ ಕಕ್ಕಟ್ಟ್ ಕಟ್ಟಿದರ್ನ ಈಗಳೂ ನೋಡಕ್.

ಆಗೆಲ್ಲ ರೈತಾಂತೇಳ್ರೆ ನಾಕ್ ನಡೆ ದನಗ ಇದ್ದೇ ಇರ್ತಿದ್ದೊ. ಕರ್‌ಬುಡುವ ಹಸ್ ಉಟ್ಟುತಾದರೆ ಅದ್ ಆ ಮನೆಯ ಭಾಗ್ಯ. ಒಂದ್ ಪಾವು ಹಾಲ್ ಸಿಕ್ಕಿರೂ ಕುಸಿಪಡ್ತಿದ್ದೊ. ಗದ್ದೆಗೆ ಹಟ್ಟಿ ಗೊಬ್ಬರ ಅಲ್ಲದೆ ಮತ್ತೊಂದ್ ಹಾಕ್‌ತಿತ್‌ಲೆ. ಮನೆಂದ ಅಷ್ಟ್ ದೂರಲಿ ಕೊಟಗೆ ಕಟ್ಟ್‌ತಿದ್ದೊ. ದನಗ ಕಾಡ್‌ಂದ ಬಂದರೆ ಕೊಟ್ಟಿಗೆಗೆ, ಕೊಟಗೆಂದ ಬುಟ್ಟರೆ ಕಾಡಿಗೆಂತೇಳುವಂಗೆ ಕಾಡ್‌ಕರೇಲಿ ಕೊಟ್ಟಿಗೆ ಇರ್ತಿತ್. ದನಗಳ ಮೇಯಕೆ ಕಾಡ್‌ಗೆ ಬುಡ್ತಿದ್ದೊ. ದನಗ ಕುಸಿ ಬಂದಷ್ಟ್ ಮೇದ್ ಹೊಟ್ಟೆ ತುಂಬುಸಿಕಂಡ್ ಕತ್ತಲಾಕನ ಹಟ್ಟಿ ಕಡೆಗೆ ಸೀದ ಬಾತಿದ್ದೊ. ಆಗೆಲ್ಲ ದನ ಮೇಸ್‌ತಿದ್ದ ಪದ್ಧತಿ ಕಮ್ಮಿ. ಎಲ್ಲೋ ಕೆಲವ್ ಇಪ್ಪತ್ತೈದ್ ಐವತ್ ನಡೆ ದನಗ ಇದ್ದವ್ ದನ ಮೇಸ್‌ತ್ತಿದ್ದೊ. ಕಾಡ್‌ದ್ ನಡು ನಡುಲಿ ಹಡ್ಲ್ ಇರ್ತಿತ್. ಬೇಕಷ್ಟ್ ನೀರ್, ಬೇಕಷ್ಟ್ ಹುಲ್ಲು ಇರ್ತಿತ್. ಹೊಟ್ಟೆ ತುಂಬ ಮೇದ್ ಒಳ್ಳ ಗೂಳಿ ಗೂಳಿಗಳಂಗೆ ಇರ್ತಿದ್ದೊ. ಕೆಲವ್ ದನಗ ಅವರಿವರ ಗದ್ದೆಗಳಿಗೆ ನುಗ್ಗಿ ಬೆಳೆಗೆ ಬಾಯಿ ಹಾಕ್‌ತಿದ್ದೊ. ಆಗ ಜಗಳ ಆತಿತ್. ಅಂದೆಲ್ಲಾ ಮುಖ್ಯಾಗಿ ಒಂದೋ ದನಗಳ ವಿಷಯಕ್ಕೆ, ಇಲ್ಲರೆ ಹಂದಿಗಳ ವಿಷಯಕ್ಕೆ ಜಗಳ ಆತಿದ್ದದ್ ಮಾಮೂಲಿ. ಹಂದಿಗಳ್ನ ಹೊರಗೆ ಬುಟ್ಟ್ ಸಾಂಕ್‌ತಿದ್ದೊ. ಆ ಹಂದಿಗಳೋ ಅವರಿವರ ಮರಗೆಣ್ಸ್, ಕೆಸನ ಬುಡನೆಲ್ಲಾ ತಿಂದ್ ಹಾಳ್ ಮಾಡ್ತಿದ್ದೊ. ಬೆಳೆ ಕಾಲಲಿ ಬತ್ತದ ಕದ್ರ್‌ನೆಲ್ಲಾ ತಿಂದ್ ನಷ್ಟ ಮಾಡ್ತಿದ್ದೊ. ಹಂದಿಗ ಹಂಗೆ ನುಗ್ಗಿ ಹಾಳ್ ಮಾಡಕನ ಕೆಲವ್ ಗುಂಡ್ ಹೊಡೆತಿದ್ದೊ. ಗುಂಡ್ ಹೊಡ್ದರೆ ಆ ಹಂದಿ ನಷ್ಟ ಮಾಡ್ದಲ್ಲೇ ಬೀಳೊಕು. ಹಂಗೆ ಬಿದ್ದರೆ ಕೇಸ್‌ಗೀಸ್ ಎಂತನೂ ಇಲ್ಲೆ. ಗುಂಡ್ ಹೊಡ್ದದ್ ಇಲ್ಲಿ, ಹಂದಿ ಬಿದ್ದದ್ ಅಲ್ಲಿಂತಾದರೆ ಮಾತ್ರ ಭಾರೀ

ಜಗಳ ಆತಿತ್. ದನಗ ತೋಟ, ಗದ್ದೆಗೆ ನುಗ್ಗಿ ನಷ್ಟ ಮಾಡಿರೆ ಅವುಗಳ್ನ ಹಿಡ್ದ್ ದೊಡ್ಡಿಗೆ ಹಾಕ್‌ತಿದ್ದೊ. ದಂಡ ಕಟ್ಟಿ ದನಗಳ್ನ ಬುಡ್ಸಿಕಂಡ್ ಬಾಕಾಗಿತ್ತ್. ದೊಡ್ಡಿಂದ ದನಗಳ್ನ ಬುಡ್ಸಿಕಾಗದೆ ಇದ್ದರೆ ನಿಯಮ ಪ್ರಕಾರ ಹರಾಜ್ ಹಾಕ್‌ತಿದ್ದೊ. ಮತ್ತೆ ಕೆಲವ್ ಜನ ದನಗಳ್ನ ಹಿಡ್ದ್ ಅವುಗಳ ಕೊಂಬುಗಳ್ನ ಕೀಸಿ ರೂಪ ಬದ್‌ಲಿಸಿ ಕದ್ದ್ ಮಾರಿಬುಡ್ತಿದ್ದೊ.

ವರ್ಷಲಿ ಒಂದೆರಡ್ ರಾಸ್‌ಗ ಹುಲಿ ಬಾಯಿಗೆ ಸಿಕ್ಕ್‌ತಿದ್ದದೂ ಉಟ್ಟು. ಸಾಮರ್ಥ್ಯ ಇದ್ದ ಕೆಲ ದನಗ ಹುಲಿಂದ ಗಾಯ ಮಾಡಿಕಂಡ್ ತಪ್ಪುಸಿಕಂಡ್ ಓಡಿ ಬಾತಿದ್ದೊ. ಹುಲಿ ಉಗುರು, ಹುಲಿ ಹಲ್ಲ್ ಭಾರೀ ವಿಷ. ನೆಲ್ಲಿಕಾಯಿ ಮರದ ಸಣ್ಣ ಗೆಲ್ಲ್‌ನ ಕಡ್ದ್ ಒಲೆಗೆ ಹಾಕಿ ಸುಟ್ಟ್, ಕೊಳ್ಳಿಲಿ ಕೆಂಡ ಆತಿದ್ದಂಗೆ ಹುಲಿ ಗಾಯ ಮಾಡಿದ್ದ ದನದ ಗಾಯಕ್ಕೆ ಹೆಟ್ಟ್‌ತ್ತಿದ್ದೊ. ಆಗ ಗಾಯಂದ ನಂಜಿ ಇಳ್ದ್ ಬೇಗ ಗುಣ ಆದೆತ ಹಿರಿಯವು ಹೇಳ್ತಿದ್ದೊ. ಬಟ್ಟೆ ಕರ್ಪೂರನ ಹೊಡಿಮಾಡಿ ಗಾಯದೊಳಗೆ ತುಂಬುಸಿ ನಳಗ ಕೂರದಂಗೆ ಬೇವುನೆಣ್ಣೆನ ಹಾಕ್‌ತಿದ್ದೊ. ಕೊಟ್ಟಗೆಲಿ ಬೇವುನೆಣ್ಣೆ ಕುಪ್ಪಿ ಯಾಗೋಳು ಇರ್ತಿತ್.

ಕೊಟ್ಟಗೆಲಿ ದನಗ ಸಗಣಿ ಹಾಕಿ ಉಚ್ಚೆ ಒಯ್ದ್ ಮೆಟ್ಟಿ ಮಾಡಿ ಆಕನ ಅಲ್ಲೆಲ್ಲಾ ಗುಂಡಿ ಆ ಬುಟ್ಟದೆ. ಹಂಗಾಗಿ ವರ್ಷಲಿ ಒಮ್ಮೆ ಇಲ್ಲರೆ ಇಮ್ಮೆ ಮಣ್ಣ್ ಹಾಕಿ ಗುಂಡಿ ಮುಚ್ಚ್‌ತ್ತಿದ್ದೊ. ದನಗ ಕೊಟ್ಟಿಗೆಗೆ ನುಗ್ಗಿದಂಗೆ ನೆಲನೆಲ್ಲಾ ಅಲ್ಲಿ ಇಲ್ಲಿ ಮೂಸಿ ಸಿಂಡ್ ತೆಗ್ದ್ ಕುಸಿ ಪಡ್ತಿದ್ದೊ. ಪರೀಕ್ಷೆ ಮಾಡಿ ಕುಸಿಪಟ್ಟ್ ಮಲ್ಗಿ ಉಸ್ಸೋತ ಉಸ್ರು ಬುಟ್ಟ್ ಮಲ್ಗ್‌ತ್ತಿದ್ದೊ.

ಮಳೆಗಾಲಲಿ ದನಗಳ್ನ ಕೊಟ್ಟಗೆಲಿ ಕಟ್ಟಿರೆ, ಬೇಸಗೆಲಿ ಗದ್ದೆಲಿ ದೊಡ್ಡಿ ಕಟ್ಟಿ ಅಲ್ಲಿ ಬುಡ್ತಿದ್ದೊ. ದೊಡ್ಡಿಲಿ ದನಗಳ್ನ ಕಟ್ಟುವ ಪದ್ಧತಿ ಇಲ್ಲೆ. ಅವುಕೆ ಕುಸಿ ಬಂದಲ್ಲಿ ಮಲ್ಕಣಕ್. ಕೊಟ್ಟಗೆಲಿ ಮಾತ್ರ ಮಾಮೂಲಿ ಎಲ್ಲಿ ಕಟ್ಟ್‌ವೆನೋ ಅಲ್ಲೇ ನಿತ್ತ್‌ಕಂಬತಿದ್ದೊ. ದೊಡ್ಡಿಂದ ದನಗಳ್ನ ಮೇಯಕೆ ಬುಟ್ಟ ಮೇಲೆ ಒಂದೆರ್ಡ್ ಹೊರೆ ಸೊಪ್ಪುನೋ ಕೊಕ್ಕಲೆನೋ ಒಳಗೆ ಹರ್‌ಂಡ್‌ತಿದ್ದೊ. ಹಿಂಗೆ ದಿನಾ ಸೊಪ್ಪು ಹಾಕ್‌ದರ್‌ಂದ ಒಳ್ಳ ಗೊಬ್ಬರ ಆತಿತ್. ಹೂಟೆ ಸುರ್ ಮಾಡ್ತಿದ್ದಂಗೆ ಗೊಬ್ಬರನ ಎಳ್ದ್ ಎಲ್ಲಾ ಗದ್ದೆಗೆ ಗುಪ್ಪೆ ಗುಪ್ಪೆ ಹಾಕ್‌ತಿದ್ದೊ. ಮಳೆ ಸುರಾಗ್ತಾ ಇದ್ದಂಗೆ ದೊಡ್ಡಿನ ಬಿಚ್ಚಕಾಗಿತ್ತ್. ದೊಡ್ಡಿ ಇದ್ದ ಗದ್ದೆಲಿ ಬೆಳೆ ಬೆಳ್ದರೆ ಬೆಳೆ

ದೋಂಬು ಆಗಿ ಬೆಳೆತಿತ್.

ದನಗ ಹಿಂಗೇ ಸತ್ತವೆಂತೇಳಿಕಾದ್ಲೆ. ಮೇಯಕೆ ಕಟ್ಟಿದಲ್ಲಿ ಕಾಲಿಗೆ ಬಳ್ಳಿ ಸುತ್ತಿಕಂಡ್ ಬಿದ್ದ್ ಸತ್ತವೆ. ಇಳಿಜಾರ್‌ಲಿ ಕಟ್ಟಿರಂತೂ ಭಾರೀ ಅಪಾಯ. ಮತ್ತೆ ಕೆಲವ್ ದನಗ ಮಂಟೆ ಇಳ್ದ್ ಬಾಕನ ಬರೆಂದಡಿಗೆ ಜಾರಿ ಬಿದ್ದ್ ಸತ್ತವೆ. ಹಲ್ಸ್‌ನಣ್ಣ್ ತಿಂಬಕನ ಗೂಂಜಿ ಸೆಕ್ಕಿಕಂಡ್ ಸತ್ತವೆ. ಕೆಲವ್ ಮಾತ್ರ ವಯಸ್ಸಾಗಿ ಕೊಟ್ಟಗೆಲೇ ಸತ್ತವೆ. ಮತ್ತೆ ಕೆಲವ್ ವಯಸ್ಸಾದ ದನಗ ಗದ್ದೆಲೋ ದಾರಿಲೋ ಬಿದ್ದ್ ಹೋದವೆ. ಆಗ ಅಲ್ಲೇ ಒಂದ್ ಚಪ್ಪರ ಹಾಕಿ ನೆರಳ್ ಮಾಡಿವೆ. ಹುಲ್ಲ್ ಹಾಕಿ ನೀರ್ ಇಸಿವೆ. ಆಗಂತೂ ಕಕ್ಕೆಗ ಅಲ್ಲಿ ಇಲ್ಲಿ ಕುದ್ದ್‌ಕಂಡ್ 'ಕಾಕಾ'ತ ಕರ್ಕಂಡ್ ಆ ದನ ಸಾಯೋದರ ಕಾಯ್ಕಂಡ್ ಇದ್ದವೆ. ನಾಕೈದ್ ದಿನ ಹಂಗೇ ಇದ್ದ ದನ ಸತ್ತೋದೆ. ಕೂಡ್ಲೆ ಕಕ್ಕೆಗ ದನದ ಕಣ್ಣ್‌ಗಳ ತಿಂದ್ ಹದ್ದ್‌ಗಳಿಗೆ ಸುದ್ದಿ ಕೊಟ್ಟವೆ ಗಡ. ಹದ್ದ್‌ಗಳಿಗೆ ಸುದ್ದಿ ಕೊಟ್ಟ್ ಬಾಕನ ದನ ಎಲ್ಯಾರ್ ಎದ್ದ್‌ಗಿದ್ದ್ ಹೋಬುಡ್ತುತ ಸುರೂಗೆ ದನದ ಕಣ್ಣ್‌ಗಳ ತಿಂಬೊದು ಗಡ. ಹದ್ದ್‌ಗ, ನಾಯಿಗ ಕಕ್ಕೆಗ ಕುದ್ಕಂಗ ಎಲ್ಲಾ ಸೇರಿ ಕಂಡ್ ಒಂದೆರ್ಡ್ ದಿನಕ್ಕೆಲ್ಲಾ ಜಡ್ಡ್‌ನ ತಿಂದ್‌ಬುಟ್ಟವೆ. ಹಿಂಗೆ ಆ ಹಟ್ಟಿದ್ ಹಿರಿಯ ದನ ತನ್ನ ಬಳಗಂದ ಕಣ್ಮರೆ ಆದೆ.

ವಯಸ್ಸಾದ ದನಗ ಸುಮ್ಮನೆ ಯಾಕೆತ್ತೇಳಿ ಕೆಲವು ಜನ ಮಾರ್ತಿದ್ದೊ. ಮತ್ತೆಷ್ಟೋ ಜನ ಹಟ್ಟಿಲೇ ಹುಟ್ಟಿ ಹಟ್ಟಿಲೇ ಬೆಳ್ದ್ ಇಷ್ಟ್ ವರ್ಷ ಗೈದುಟು. ಅದರ ಸಂತಾನನೇ ಈಗ ಹಟ್ಟಿ ತುಂಬಿಟು. ಅದ್ ಸತ್ತರೆ ಹಟ್ಟಿಲೇ ಸಾಯಲಿತ ಕಡೇ ಮುಟ್ಟ ನೋಡಿಕಂಡ್ ಸಾಯಕನ ಕಣ್ಣೀರ್ ಹಾಕ್‌ತಿದ್ದೊ.

* * * * *

# ಬೇಟೆ ಬುಟ್ಟೋತ್!

ಸಾವ್ರಾರ್ ವರ್ಷಗಳ ಹಿಂದೆ ಮನುಷ್ಯ ಆಹಾರಕ್ಕಾಗಿ ಬೇಟೆ ಆಡ್ತಿತ್ತ್. ರಾಜರ ಕಾಲಲಿ ಬೇಟೆ ಒಂದ್ ಮನರಂಜನೆತ ಆತ್. ಮತ್ತೆ ಕೆಲವ್‌ಕೆ ಅದ್ ಒಂದ್ ಚಟ ಆತ್.

ಬೇಟೆಗಾರನೊಟ್ಟಿಗೆ ಬೇಟೆ ಆಡ್ದ ದಿನಗಳ ಬಗ್ಗೆ ಮಾತಾಡಿಕೆ ಕುದ್ದರೆ ಉಟ್ಟಲ್ಲಾ, ದಿನ ಕಳೆದೇ ಗೊತ್ತಾಕಿಲೆ. ನಾ ಹಂಗೆ ಹೊಡ್ದೆ, ನಾ ಹಿಂಗೆ ಹೊಡ್ದೆ, ಓಟು ಗುಂಡು ಹೊಡ್ದೆ, ಹಾರು ಗುಂಡು ಹೊಡ್ದೆ, ಕುದ್ದ್ ಹೊಡ್ದೆ, ಬಗ್ಗಿ ಹೊಡ್ದೆ, ನಿತ್ತ್ ಹೊಡ್ದೆ.. ಓಹೋ ಹೊ ಆ ಕತೆ ಕೇಳ್ದೇ ಒಂದ್ ರೋಚಕ ಮತ್ತೆ ಭಯಾನಕ ಅನುಭವ. ಕಾಡ್ದ್ ಯಾವ ಮೂಲೆನ ಕೇಳ್ರೂ ಬೇಟೆಗಾರಂಗೆ ಎಲ್ಲಾ ಗೊತ್ತೆ. ಕುಂಬುಳಿ ಮರ, ಅಂಬಟೆ ಮರ, ಚಾಂದಿಮರ, ನೆಲ್ಲಿ, ಗೋಳಿ, ಸಣ್ಣಕ್ಕಿ ಹಣ್ಣ್‌ಮರ, ಸೀಗೆ ತಡೆ ಹಿಂಗೆ ಹಣ್ಣ್ ಮರಗ ಎಲ್ಲೆಲ್ಲಿ ಒಳೊ, ಯಾವ ಯಾವ ಸಮೆಲಿ ಹೂವು, ಯಾವ ಯಾವ ಸಮೆಲಿ ಹಣ್ಣಾದೆಂತೆಲ್ಲಾ ಬೇಟೆಗಾರಂಗೆ ಗೊತ್ತಿದ್ದದೆ. ಜಾತಿಗಳ ಹೆಜ್ಜೆ ಗುರ್ತುನ ನೋಡಿ ಇದ್ ಕುರೇಂಗಿದ್, ಸಾರಗದ್, ಕಡವೆದ್, ಹಂದಿದ್, ಮುಳ್ಳು ಹಂದಿದ್ ಹೆಜ್ಜೆಂತ ಹೇಳ್ದೆ. ಅಷ್ಟೇ ಅಲ್ಲ, ಕಾಡ್ ಹಂದಿದ್ ಹೆಜ್ಜೆನ ನೋಡಿ ಇಂತಿಷ್ಟೇ ತೂಕದ ಹಂದಿತ ಹೇಳ್‌ವಷ್ಟು ಅವಂಗೆ ಗೊತ್ತು. ಕೆಸ್ರ್ ಮೆತ್ತಿಕಂಡ ಹಂದಿ ಮರಕ್ಕೆ ಮೈ ಉಜ್ಜಿದರ್‌ನ, ಇಲ್ಲರೆ ಹುಲ್ಲ್‌ಲಿ ಕೆಸ್ರ್ ಅಂಟಿದರ ಅಂದಾಜ್ ಮಾಡಿ ಅದ್ರ ಎತ್ತರ ಇಷ್ಟೇ ಇರ್ದುತ ಲೆಕ್ಕ ಹಾಕಿ ಅಲ್ಲೇ ಕೋವಿ ಕಟ್ಟುದುಸನ ಗೊತ್ತಿದ್ದದೆ. ಕೋವಿ ಕಟ್ಟಿದ ಜಾಗಲಿ ಹಂದಿನೇ ಬಲಿಯಾದೆತ ಹೇಳಿಕಾದುಲೆ. ದನನೂ ಬೀಳ್ದು, ಇಲ್ಲರೆ ಮನುಷ್ಯನೂ ಸಾಯದು. ಹಗ್ಲ್ ಹೊತ್ತ್‌ಲಿ ಮುಳ್ಳು ಹಂದಿಗ ಮಾಳಿಲಿ ಇಲ್ಲರೆ ಪಾರೆ ಅಡಿಲಿ ಮಲ್ಗಿವೆ. ಅಂಥಾ ಮಾಳಿಗಳ ಬೇಟೆಗಾರ ಪತ್ತೆ ಮಾಡಿಬುಟ್ಟದೆ. ಮರದ ಪೋಟೆ ಸವುಕಂಡಿದ್ದರೆ

ಆ ಪೋಟೆಗೆ ಕಬ್ಬೆಕ್ಕ್ ಇಲ್ಲರೆ ಪಾಂಜ ಹೊಕ್ಕಿದೆತ ಚಾಣಾಕ್ಷ ಬೇಟೆಗಾರ ಗೊತ್ತು ಮಾಡ್ದೆ.

ಹಿಂದೆಲ್ಲಾ ಇರ್ಲ್ ಬೇಟೆಯಾಡಿಕೆ ಹೋಕನ ತಲೆಗೆ ಲಾಟೀನ್‌ನ ಕಟ್ಟಿಕಂಬತಿದ್ದೊಗಡ. ಆಗೆಲ್ಲಾ ಬೇಕಷ್ಟ್ ಜಾತಿಗ ಇರ್ತಿದ್ದೊ. ಜಾತಿಗಳಿಗೆ ದೊಡ್ಡ ಗಾಬರಿನೂ ಇರ್ತಿತ್ಲೆ. ಹಂಗಾಗಿ ಲಾಟೀನ್ ಬೆಳ್ಕ್‌ಲಿ ಜಾತಿನ ಕಂಡರೆ ಗುಂಡ್ ಹೊಡೆತಿದ್ದೊ. ಮತ್ತೆ ಮತ್ತೆ ಹೆಡ್‌ಲೈಟ್‌ತ ಬಾತ್. ಹೆಡ್‌ಲೈಟ್ ಕಟ್ಟಿರಂತೂ ಎಷ್ಟೋ ದೂರಕ್ಕೆ ಜಾತಿದ್ ಕಣ್ಣ್ ಫಳ ಫಳತ ಹೊಳ್ದದೆ. ಹಂಗೆ ವಾಹನದ ಬೆಳ್ಕ್‌ಲಿ ಗುಂಡ್ ಹೊಡೆತಿದ್ದೊ. ಆಧುನಿಕ ಕೋವಿ ಬಾಕೆ ಮುಂದೆ ತಿರಿ ಕೋವಿತ ಇತ್ತ್. ತಿರಿಂತೇಳ್ರೆ ಬತ್ತಿತ ಅರ್ಥ. ಜಾತಿ ಕಂಡ ಕೂಡ್ಲೆ ಒಬ್ಬನ ಮುಂದೆ ನಿಲ್ಸಿಕಂಡ್ ಅಂವನ ಹೆಗ್ಲ್ ಮೇಲೆ ಕೋವಿ ಕೊಳನ ಮಡ್ಗಿ, ಕೋವಿದ್ ಈ ಕೇಪುನ ಕೋವಿಲಿ ಕೇಪು ಇದ್ದದೆ ನೋಡಿ, ಅಲ್ಲಿ ಆಗ ಕೇಪು ಇರ್ತಿತ್ಲೆತ ಕಂಡದೆ. ಆ ಜಾಗಲಿ ಕೋವಿ ಮದ್ದ್‌ಗೆ ಬೆಂಕಿ ಹಿಡಿವಂಗೆ ಬತ್ತಿ ಇರ್ತಿತ್. ಪಿಟಾಕಿ ಬತ್ತಿಗೆ ಬೆಂಕಿ ಕೊಟ್ಟಂಗೆ ಆ ಬತ್ತಿಗೆ ಬೆಂಕಿ ಕೊಡ್ತಿದ್ದೊ. ಆಗ ಗುಂಡು ಸಿಡೆತಿತ್. ಜಾತಿ ಬೀಳ್ತಿತ್ತ್. ಅಲ್ಲಾ, ಅಷ್ಟ್ ಹೊತ್ತ್‌ಗಂಟ ಜಾತಿ ನಿಲ್ತಿತ್ತಾ? ನಿತ್ತಿರ್ದು. ಇಲ್ಲರೆ ಗುಂಡ್ ಹೊಡೆತಿದ್ದೊನಾ? ಅದ್ ಸರಿ, ಹೆಗ್ಲ್ ಕೊಟ್ಟ್ ನಿತ್ತವಂಗೆ ಎಂತಾ ಧೈರ್ಯ ಇದ್ದಿರ್ದು? ಮತ್ತೆ ಮತ್ತೆ ಹೊಸ ಹೊಸ ಕೋವಿಗ ಬಂದೊ. ಜೋಡಿ ನಳಿಗೆ ಕೋವಿಗ, ರೈಫಲ್‌ಗ ಮತ್ತೆ ಎಂತೆಂತದೋ ಈಗ ಬಂದು ಬುಟ್ಟುಟು. ಲೆಕ್ಕ ಮಿತಿ ಇಲ್ಲದಷ್ಟು ಆನೆ, ಕಾಟಿ, ಹುಲಿ ಬೇಟೆಗಾರನ ಗುಂಡ್‌ಗೆ ಬಲಿಯಾಗದ ಜಾತಿ ಯಾವ್ದುಟ್ಟು?

ಒಂದೇ ಗುಂಡ್‌ಗೆ ಐದಾರ್ ಕಾಡ್‌ಕೋಳಿಗಳ ಹೊಡ್ದದ್ದ್, ಒಳಿಕುದ್ದ ಒಂದೇ ಇರ್ಲ್‌ಲಿ ಎರಡ್ ಕಡವೆ ಹೊಡ್ದದ್, ಬೆಳೆ ತಿಂಬಕೆ ಬಾಕನ ಇರ್ಲ್ ಒಳಿ ಕುದ್ದ್ ಮೂರು ಕಾಡ್ ಹಂದಿ ಹೊಡ್ದದ್, ಕೆಂಜೆರಿ, ಕೋಂಬಕ್ಕಿ, ಚಿಪ್ಪು ಹಂದಿ, ಉಡುಂಬುಗಳ್ನ ಹೊಡ್ದದ್ ಅಂತದ್ದರ್ನೆಲ್ಲ ಇಂದ್ ಬೇಟೆಗಾರ ಗ್ಯಾನ ಮಾಡಿಕಂಡ್ ಕೂರೊಕು ಅಷ್ಟೆ. ಹುಲಿ ಹೊಡ್ದ್ ಅದರ ಚಕ್ಕಳನ ಮೇಜಕ್ಕೆ ಹಾಸ್‌ತಿದ್ದೊಗಡ. ಕುರೇಂಗಿ, ಸಾರಗ, ಕಡವೆಗಳ ಹಾಳೆಲಿ ಕೂಸುನ ಮಲಗ್‌ಸ್ತಿದ್ದೊ. ಹಾಳೆಂತೇಳ್ರೆ ಚಕ್ಕಳತ ಅರ್ಥ. ಕೆಲ ಜನ ಸಾರಗ, ಕಡವೆ ಹಾಳೆಗಳ್‌ಲಿ ಬೀಸುವ ಕಲ್ಲ್‌ಲಿ

ಅಕ್ಕಿನೊ, ರಾಗಿನೊ ಬೀಸ್ತಿದ್ದೊ. ಕೊಂಬುಗಳಿಗೆ ಮೊಕ, ತಲೆ ಆಕಾರ ಕೊಟ್ಟ್ ಅಲಂಕಾರಿಕವಾಗಿ ಗೋಡೆಗೆ ಹೊಡೆತಿದ್ದೊ. ಆ ಕೊಂಬುಗಳಿಗೆ ತೊಪ್ಪಿ, ಕೋಟುನೆಲ್ಲಾ ನೇತ್ ಹಾಕ್ತ್ತಿದ್ದೊ. ಕೆಲವ್ ತಡೆಕೋಲು, ಇಲ್ಲರೆ ಅಚ್ಚ್‌ಕೋಲು, ಕೊಡೆ, ಇಂತದರ್ರೂ ಅಡ್ಡ ಇಸ್‌ತಿದ್ದೊ. ಕಾಡ್‌ಕೋಳಿ ಹುಂಜದ್ ಕುತ್ತಿಗೆ–ಬೆನ್ನ್‌ದ್ ಚುಳ್ಳು ಚುಳ್ಳು ಪಟ್ಟೆನ ಗೋಡೆಗೆ ಅಂಟ್‌ಸ್‌ತಿದ್ದೊ ಊರ್‌ಲಿ ಮೊದುವೆ ಉಟ್ಟುತಾದರೆ ಕಾಡ್ ಮಾಸ ಇದ್ದೇ ಇರೊಕುಂತೇಳುವ ಕಾಲ ಅದಾಗಿತ್ತ್. ಅಂಥಾ ಕಾಲ ಇನ್ನ್ ಬಾಕಿಲೆ. ಈಗ ವನ್ಯಜೀವಿ ಸಂರಕ್ಷಣೆ ಕಾನೂನು ಜಾರಿಗೆ ಬಂದುಟು. ಸರಕಾರ ಬೇಟೆನ ಪೂರ್ತಿ ನಿಷೇಧ ಮಾಡಿಟ್ಟು.

ಹಂಗಾಗಿ ಬೇಟೆ ಬಗ್ಗೆ ಹಿರಿಯರ ಅನುಭವನ ಕೇಳಕ್. ಲೈಟ್ ಕಟ್ಟಿಕಂಡ್ ಬೇಟೆ ಆಡ್ತ್ತಿದ್ದವರ ಅನುಭವ ಒಂದು ರೀತಿದಾದರೆ ಒಳಿಕುದ್ದ್ ಬೇಟೆ ಆಡ್ತಿದ್ದವರ ಅನುಭವನೇ ಬೇರೆ. ಕೂಡು ಬೇಟೆಯ ಅನುಭವ ಮತ್ತೊಂದ್ ಥರ. ಬೇಟೆ ಕಲ್ತ ಸುರು ಸುರೂಲಿ ಕಂಡದ್ದಕ್ಕೆಲ್ಲಾ ಗುಂಡೇ. ಲೈಟ್ ಬ್ಯಾಟೆಗೆ ಹೋಕನ ಜೇಡ ಹುಳದ ಕಣ್ಣ್, ಎಲಿ, ಹಾವು, ಮಂಜ್ ಹನಿ ಪಳ್‌ಂತ ಹೊಳ್ದರೆ ಅದ್ಕೂ ಗುಂಡ್ ಹೊಡ್ದವು ಇರುವೊ. ತರಕಾರಿ ತೋಟಲಿ ಮಡ್ಕೆಗೆ ಕಣ್ಣ್ ಬುಡ್ಸಿ ಬೇಲಿಗೆ ಕವುಚಿ ಹಾಕಿದ ಆ ಮಡ್ಕೆಗೂ ಗುಂಡು ಹೊಡ್ದವೂ ಸನ ಇರುವೊ. ಮರಲಿ ಕುದ್ದ ಪಾಂಜಕ್ಕೆ ಗುಂಡ್ ಹೊಡ್ದ್ ಅದ್ ನೆಲಕ್ಕೆ ಬೀಳದೆ ಅಲ್ಲೇ ಕೋಸಿಕಂಡ್ ಸತ್ತ್ ಹೋಗಿದ್ದದೆ. ಸತ್ತ ಪಾಂಜಕ್ಕೆ ಎರ್ಡ್ ಅಲ್ಲ ಮೂರ್ ನಾಕ್ ಗುಂಡ್ ಹೊಡ್ದರೂ ಬೀಳದೆ ಮರ ಹತ್ತಿ ಬೀಳ್ಸಿಕೂ ಆಗದೆ ಬೇಟೆಗಾರ ಬರೀಕೈಲಿ ಬಂದದೂ ಉಟ್ಟುಗಡ. ಬೇಟೆನ ಚಟ ಮಾಡಿಕಂಡವ್ ಇರ್‌ಳ್ ಇಡೀ ಬೇಟೆಯಾಡಿ ಹಗ್ಲ್ ನಿದ್ದೆ ಮಾಡ್ವೆ. ಹಿಂಗಿರುವ ಬೇಟೆಗಾರ ಕುಟುಂಬ ಅಭಿವೃದ್ಧಿಯಾದು ಕಷ್ಟ. ಒಂದಂತೂ ನಿಜ. ಬೇಟೆಂತೇಳ್ದು ಅಪಾಯ. ಎಷ್ಟೋ ಜನ ಬೇಟೆಗಾರರ್ ಪ್ರಾಣ ಕಳ್ಕಂಡೊಳೊ. ಲಕ್ಷಾಂತರ ಜಾತಿಗ ಪ್ರಾಣ ಕಳ್ಕಂಡೊಳೊ. ಕೆಲ ಜೀವಿಗ ನಿರ್ವಂಸ ಸನ ಆಗೊಳೊ.

* * * * *

# ಸಂತೆತೇಳ್ರೆ...

ಸಂತೆಗೆ ಹೋದೂತೇಳ್ರೆ ಜಾತ್ರೆಗೆ ಹೋದಷ್ಟೇ ಕುಸಿನ ವಿಷಯ. ಜಾತ್ರೆ ವರ್ಷಕ್ಕೆ ಒಮ್ಮೆ ಬಾದು. ಆದರೆ ಸಂತೆ ವಾರ ವಾರನೂ ಇದ್ದದೆ. ಕೆಲವ್ ಜನ ವಾರ ವಾರನೂ ಸಂತೆಗೆ ಹೋದವೆ. ಮತ್ತೆ ಕೆಲವ್ ಹದ್ನೈದ್ ದಿನಕ್ಕೆ ಇಲ್ಲರೆ ತಿಂಗಕೊಮ್ಮೆ ಹೋದೂ ಉಟ್ಟು. ಇನ್ನ್ ಕೆಲವ್ ಹಬ್ಬದ ಸಂತೆನ ಮಾತ್ರ ಬುಡ್ದೇಲೆ.

ಹಬ್ಬದ ಸಂತೇಂತೇಳ್ರೆ ಯಾವ್ದಾರ್ ಹಬ್ಬದ ಹಿಂದೆನ ವಾರದ ಸಂತೆ. ಆ ದಿನದ ಸಂತೆನ ಹಬ್ಬದ ಹೆಸ್ರೇಳಿ ಸಂತೆ ದಿನತ ಹೇಳಿವೆ. ಉದಾಹರಣೆಗೆ ಕೈಲ್ ಪೋದ್ ಸಂತೆ, ಹುತ್ರಿ ಸಂತೆ, ಉಗಾದಿ ಸಂತೆ ಹಿಂಗೆ. ಅಂದ್‌ನ ದಿನ ಸಂತೆ ಮಾತ್ರ ಭಾರೀ ತುಮುಕು ಇದ್ದದೆ. ಅಲ್ಲಿ ಕಾಲ್ ಹಾಕಿಕೆ ಜಾಗ ಇರ್ದುಲೆ.

ಅಂದೆಲ್ಲಾ ಸಂತೆಗೆ ಹೊರ್ಡಕನ ಕೈಲಿ ಗಟ್ಟಿಮುಟ್ಟಾದ ಬ್ಯಾಗ್ ಇರ್ತಿತ್. ಒಂದೋ ಗೋಣಿ ಬ್ಯಾಗ್, ಇಲ್ಲರೆ ಬಟ್ಟೆ ಬ್ಯಾಗ್, ಕೆಲವ್ರ ಕೈಲಿ ಸೈಕಲ್ ಬ್ಯಾಗ್‌ಸನ ಇರ್ತಿತ್ತ್. ಸೈಕಲ್ ಬ್ಯಾಗ್‌ಂತೇಳ್ರೆ ಬೆತ್ತಂದ ಮಾಡ್ದ ಬ್ಯಾಗ್. ಹರ್ದ್ ಹೋಕಾಗದ್, ಚೆಲ್ಲಿ ಹೋಕಾಗದ್ ಅಂಥಾ ಗಟ್ಟಿ ಬ್ಯಾಗ್ ಇರ್ತಿತ್. ಅದ್ರೊಟ್ಟಿಗೆ ತೆಂಗ್‌ನ ಎಣ್ಣೆ, ಒಳ್ಳೆಣ್ಣೆ ಮತ್ತೆ ಸೀಮೆಣ್ಣೆಗೆತ ಬ್ಯಾರೆ ಬ್ಯಾರೆ ಕುಪ್ಪಿ ಇರ್ತಿತ್ತ್.  ಅಂಗ್ಡಿಗಳ್‌ಲಿ ಕೇಳ್ದಷ್ಟ್ ಸೀಮೆಣ್ಣೆ ಸಿಕ್ಕ್‌ತಿತ್ತ್. ಟಿನ್ನ್‌ಗಳ್‌ಲಿ ಸೀಮೆಣ್ಣೆ ಮಾರ್ತಿದ್ದೊ.

ಸಂತೆಗೆ ಹೋಕನ ಆ ಮನೆಯವ್ ಈ ಮನೆಯವೆಲ್ಲಾ ಕೂಡಿಕಂಡ್ ಕಾಡ್ ದಾರಿಲಿ ಮಾತಾಡಿಕಂಡ್ ಎಷ್ಟೋ ದೂರ ನಡೆಕಾಗಿತ್ತ್. ಕೆಲವ್ ಜನ ಮಕ್ಕಳ್ನ ಹೆಗ್ಲ್ ಮೇಲೆ ಕೂರ್ಸಿಕಂಡ್ ಸಂತೆಮುಟ್ಟ ನಡೆತಿದ್ದೊ. ಬಾಕಿ ಜನ ಬಸ್ ಇದ್ದರೆ ಬಸ್ಸ್, ಅದಿಲ್ಲರೆ ವ್ಯಾನ್ ಅದ್ ತಪ್ಪಿರೆ ಜೀಪು ಹತ್ತ್‌ತಿದ್ದೊ. ಆಗೆಲ್ಲಾ

ಜೀಪುಗಿಂತಲೂ ವ್ಯಾನ್‌ಗಳೇ ಜಾಸ್ತಿ ಇದ್ದದ್. ವ್ಯಾನ್‌ನಂವ ಕಂಡವ್ರನ್ನೆಲ್ಲಾ ಹತ್ತಿಸಿಕಂಬತಿತ್ತ್. ವ್ಯಾನ್‌ದ್ ಬಾಗ್ಲ್ ಹಾಕ್‌ತಿತ್‌ಲೆ. ಯಾಕೆತೇಳ್ರೆ ಬಾಗ್ಲ್ ಹಾಕಿಕೇ ಆತಿತ್ಲೆ. ಜೇನ್ ಪೆಟ್ಟಿಗೆಲಿ ನಳಗ ಹೊರಗೆ ಕುದ್ದವಲ್ಲ, ಹಂಗೆ ಜನಗ ಬಾಗ್‌ಲ್‌ಲಿ ನೇತಲಾಡ್ತಿದ್ದೊ. ಜೀಪುಗಳ್ಲೂ ಹಂಗೆ. ಡ್ರೈವರ್‌ಗೇ ಕೂರಿಕೆ ಜಾಗ ಇರ್ದುಲೆ. ಸ್ಟಿಯರಿಂಗ್ ಹಿಡ್ಕಂಡ ಅಂವನ ಕುಂಡೆ ಹೊರಗೆ ಇರ್ತಿತ್. ಎಕ್ಸ್‌ಲೆಟರ್ ಒತ್ತಿಕೆ, ಬ್ರೇಕ್ ಹಾಕಿಕೆ, ಕ್ಲಚ್ ಮೆಟ್ಟಿಕೆ ಸೆರೆ ಮಾಡಿ ಕಾಲ್‌ಗೆ ಜಾಗ ಮಾಡಿಕಂಬತಿತ್ತ್. ಸಂತೆಗೆ ಹೋಕನ ಹೆಂಗೋ ಆಗೋತಿತ್ತ್. ಸಾಮಾನ್ ಮಾಡಿಕಂಡ್ ಬಾಕನ ಮಾತ್ರ ಆ ಪಾಡ್ನ ಹೇಳ್ದು ಬ್ಯಾಡ.

ಸಂತೆಗೆತ ಹೋಗವ್ ಸಂತೆಗೆ ಮಾತ್ರ ಅಲ್ಲ, ಬೇರೆ ಬೇರೆ ಕೆಲ್ಸಗಳ್ನೂ ಅಂಟಿಸಿಕಂಬತ್ತಿದ್ದೊ. ಆಸ್ಪತ್ರೆಗೆ ಹೋಗವ್ ಆಸ್ಪತ್ರೆಗೆ, ಚವುರ ಮಾಡ್ಸಿಕಂಬವ್ ಚವುರದ ಅಂಗ್ಡಿಗೆ, ಹೊಸಾ ಬಟ್ಟೆ ತೆಗೆವ್ ಬಟ್ಟೆ ಅಂಗ್ಡಿಗೆ, ಬಟ್ಟೆ ಹೊಲೆಕೆ ಹಾಕವ್ ದರ್ಜಿ ಹತ್ರ, ಕೊಡೆಗೆ ಅಡೆ ಹಾಕ್ಸವ್, ತಂತಿ, ಕುದ್ರೆ ಹಾಕ್ಸವ್ ಕೊಡೆ ರಿಪೇರಿಯಂವನ ಹತ್ರ, ಟಾರ್ಚ್ ರಿಪೇರಿ, ಬೀಗ ರಿಪೇರಿ ಕತ್ತಿ ರಿಪೇರಿತ್ತೆಲ್ಲಾ ಸುತ್ತಾಡಿಕಂಡ್ ಮತ್ತೆ ಸಂತೆ ಒಳಗೆ ನುಗ್ಗುತ್ತಿದ್ದೊ. ಅಷ್ಟೊತ್ತಿಗೆ ಈ ಪಡ್ಡೆ ಹೈದಂಗ ಎಲ್ಲಿ ಒಳೊ? ಅವ್ರ ಮಜನೇ ಬೇರೆ. ಬಾಡಿಗೆ ಸೈಕಲ್ ತಕಂಡ್ ಕಲೆಕೆ ಆಟದ ಮೈದಾನಕೆ ಹೋತಿದ್ದೊ. ಒಂದ್ ಗಂಟೆಗೆ ನಾಕಾಣಿ ಬಾಡಿಗೆ ಕಟ್ಟಿಕಾಗಿತ್ತ್.

ಕವುಡಿ ಬುಡವ್ ರಸ್ತೆ ಕರೆಲಿ ಕೊಡೆ ಬುಡ್ಸಿಕಂಡ್ ಗಿರಾಕಿಗಳ್ನ ಕರ್ದ್ ಕೊಡೆ ಕೆಳಗೆ ಕುದ್ರಿಸಿಕಂಡ್ ಶಾಸ್ತ್ರ ಹೇಳ್ತಿದ್ದೊ. ಉಡುಂಬು ತುಪ್ಪ, ಕೀರಿ ತುಪ್ಪ, ನವುಲು ತುಪ್ಪಂತೇಳಿಕಂಡ್ ಎಂತೆಂತದೋ ಕಾಯಿಲೆಗೆ ಎಣ್ಣೆ ಮದ್ದ್ ಕೊಡ್ತಿದ್ದೊ. ನಾರ್ ಬೇರ್‌ಗಳ್ನ ಗುಡ್ಡೆ ಹಾಕಂಡ್ ಅದ್ ತಕಣಿ, ಇದ್ ತಕಣಿ, ದಿಂಬು ಕೆಳಗೆ ಮಡ್ಕಣಿ, ಒಳ್ಳೊಳ್ಳ ಕನ್ಸ್ ಬಿದ್ದದೆಂತೆಲ್ಲಾ ಹೇಳಿ ದುಡ್ಡ್ ಪೀಂಕ್‌ಸ್‌ತಿದ್ದೊ. ಭೂತ ಕನ್ನಡಿ ಡಬ್ಬಿ ಒಳಗೆ ಬೊಂಬಾಯಿ, ಡೆಲ್ಲಿ, ಚಾರ್‌ಮಿನಾರ್‌ಂತೆಲ್ಲಾ ತೋರ್‌ಸ್‌ತ್ತಿದ್ದೊ. ಇನ್ನೊಂದ್ ಕಡೆ ದೊಂಬರ ಆಟದಂವ ಕೊಳಲು ಊದಿಕಂಡ್ ಟುಂ ಟುಂ, ಟುಂ ಟುಂ, ಟುಂ ಟುಂತ ಡಮರುಗ ಆಡ್ಸಿಕಂಡ್ ಆಟ ತೋರ್ಸ್‌ತ್ತಿತ್ತ್. ಮೈದಾನದ ನಡುಲಿ ಯಾರೂ ಹಿಡ್ಕಣದೆ, ಯಾವ ಆಧಾರನೂ ಇಲ್ಲದೆ ಏಣಿನ ನಿಲ್ಸಿಕಂಡ್ ಪಟಪಟಾಂತ ಹತ್ತಿ ಇಳೆತಿತ್ತ್. ಕಬ್ಬಿಣದ ಕಂಬಿನ ಒಬ್ಬನ ದೊಂಡೆಂದ ಇನ್ನೊಬ್ಬನ

ದೊಂಡೆಗೆ ಕುತ್ತಿಕಂಡ್ ಬಗ್ಗುಸುದು, ಎದೆ ಮೇಲೆ ಸೈಜ಼್ ಕಲ್ಲ್‌ನ ಮಡ್ಗಿ ದೊಡ್ಡ ಮುಟ್ಟಿಂದ ಒಡೆದು ಮಾಡ್ತಿದ್ದೊ. ಒಬ್ಬ ಜೀಪುನ ಸೊಂಟಕೆ ಕಟ್ಟಿಕಂಡ್ ಎಳೆದು, ನೀರ್ ತುಂಬಿದ ಬಿಂದಿಗೆನ ಕಚ್ಚಿ ಎತ್ತುದು, ಸೈಕಲ್‌ಲಿ ಸರ್ಕಸ್ ಮಾಡ್ದು, ಒಬ್ಬನ ಜೀವಂತ ಹೂಣ್ದು, ಕುತ್ತಿಗೆನ ಕೊಯ್ದಂಗೆ ಮಾಡಿ ರಕ್ತನ ತೋರ್ಸುದು, ಹಿಂಗೆ ಎಂತೆಂತದೋ ಆಟಗಳ್ನ ಆಡಿ ತೋರ್ಸಿ ದುಡ್ಡು ವಸೂಲ್ ಮಾಡ್ತಿದ್ದೊ. ಅಂದೆಲ್ಲಾ ಸಂತೆಂತೇಳ್ರೆ ಅದ್ ಬರೀ ಸಂತೆ ಮಾತ್ರ ಅಲ್ಲ, ಅದೊಂದ್ ಮನರಂಜನೆ ದಿನನೂ ಆಗಿರ್ತಿತ್ತ್.

ದೊಂಬರ ಆಟ ನೋಡಿಕಂಡ್ ಸಂತೆ ಒಳಗೆ ನುಗ್ಗಕನ ಅಲ್ಲಿ ಕುದ್ದ್‌ಕಂಡ್ ವ್ಯಾಪಾರ ಮಾಡ್ತಿದ್ದ ವ್ಯಾಪಾರಿಗ ಗಿರಾಕಿಗಳ್ನ ಕರ್ದ್ ಮಾತಾಡ್ಸುದರ ಕೇಳ್ದೇ ಒಂದ್ ಕುಸಿ. ಅಣ್ಣಾ, ಅಕ್ಕಾ, ಯಜಮಾನ್ರೆ, ಸಾಹುಕಾರ್ರೆ ಇಲ್ಲಿ ಬನ್ನಿ, ಈ ಕಡೆ ಬನ್ನಿಂತ ಕರ್‍ಯಕನ ಮನ್ಸ್‌ಗೆ ಕುಸಿ ಆಗದೆ ಇದ್ದದೆನಾ? ತನ್ನನ ಯಾರೂ ಯಜಮಾನತಾಗಲಿ, ಸಾಹುಕಾರಾತಾಗಲಿ ಕರ್ದವು ಇಲ್ಲೆ. ಕಡೆ ಪಕ್ಷ ಸಂತೆಲ್ಲಾರೂ ಕರ್ದವಲ್ಲಾಂತ ಕುಸಿಪಟ್ಟ್‌ಕಂಡ್ ಸಂತೆ ಸುತ್ತುದು ಕುಸಿನ ವಿಷಯನೇ ಆಗಿದ್ದದೆ.

ಮಜ್ಜಿಗೆ, ಪಾನಕ, ಕಾಮ ಕಸ್ತೂರಿ ಬೀಜ ಹಾಕಿದ ಶರಬತ್, ಗೋಲಿ ಸೋಡ, ಬಚ್ಚಂಕಾಯಿ, ಐಸ್‌ಕ್ಯಾಂಡಿ ಅಂಗ್ಡಿಗೆಲ್ಲಾ ಅಲ್ಲಲ್ಲಿ ಇರ್ತಿದ್ದೊ. ಬಳೆ ಅಂಗ್ಡಿ ಮುಂದೆ ಹೆಣ್ಮಕ್ಕ ಚಾಪೆಲೋ ಗೋಣಿಲೋ ಕುದ್ದ್‌ಕಂಡ್ ಬಳೆ ನೋಡ್ತಿದ್ದೊ. ಆಗೆಲ್ಲಾ ಬರೀ ಕುಪ್ಪಿ ಬಳೆಗಳೇ ಇರ್ತಿದ್ದದ್. ಬಳೆ ತೊಟ್ಟ ಮೇಲೆ ಬಳೆ ರಾಶಿನ ಮೂರ್ ಮೂರ್ ಸತಿ ಮುಟ್ಟಿ ನಮಸ್ಕಾರ ಮಾಡಿ ಗೌರವ ಕೊಟ್ಟ್ ಏಳ್ತಿದ್ದೊ. ಬಳೆ ಅಂಗ್ಡಿಂದ ಮುಂದೆ ದಾಟಿರೆ ಚವುರಿ, ಜಡೆ ಬಳ್ಳಿ, ಹೇರ್‌ಪಿನ್ ಮಣಿಸರ, ಲವೆನ್ ಟಾಕಿಯೊ, ಕುಂಕುಮ, ಕೋಂಬಾಚಣಿ, ಚೀರೆಣಿಗೆ, ಬಟ್ಟೆ ಪಿನ್ನ್, ಇಭೂತಿ ಉಂಡೆ, ಊದುಬತ್ತಿ, ಕರ್ಪೂರ, ಸಾಂಬ್ರಾಣಿ, ಸೂಜಿ–ನೂಲುಂಡೆ ಅಂಗ್ಡಿ ಇರ್ತಿತ್ತ್. ಆ ಅಂಗ್ಡಿ ದಾಟಿಕಂಡ್ ಮುಂದೆ ಹೋದರೆ ಟೀ ಹೊಡಿದ್ ಅಂಗ್ಡಿ. ಆಗ ಟೀ ಹೊಡಿದ್ ಡಬ್ಬಕ್ಕಿಂತ ಸಣ್ಣ ಸಣ್ಣ ಪ್ಯಾಕೆಟ್ ಸರಗಳ್‌ನ ನೇತ್ ಹಾಕ್‌ತಿದ್ದೊ. 5 ಪೈಸ, 10 ಪೈಸ, 20 ಪೈಸ ಪಾವುಲಿ ಥರದ ಅರಶಿಣ ಬಣ್ಣದ ಪ್ಯಾಕ್‌ಗ ಇರ್ತಿದ್ದೊ. ಕೊಡಗ್‌ಲಿ ಕಾಫಿ ಬೆಳ್ದರೂ ಟೀ ಹೊಡಿದೇ ಕಾರ್‌ಬಾರ್. ಸಂತೆಗೆ ಹೋದರೆ ಟೀ ಹೊಡಿ ತಾದು ಅಂದ್ ವಿಶೇಷ ಆಗಿರ್‌ತಿತ್ತ್.

ಕತ್ತಿ ಚಾಕ್‌ಗಳಿಗೆ ಸಾಣೆ ಹಿಡೆಂವ ಸಾಣೆ ಕಲ್ಲ್‌ನ ತಿರ್‌ಗಿಸಿಕಂಡ್ ಅದ್ ಗಿರ್‍ರ್ತ ಸದ್ದ್ ಮಾಡಿಕಂಡ್ ಕಿಡಿ ರಟ್ಟಿಸಿಕಂಡ್ ಕೆಲ್ಸ ಮಾಡ್ತಿತ್. ಆಚೆ ಹೊಸೊಪ್ಪು, ಬೀಡಿ, ಬೆಂಕಿಪಟ್ನ, ಉಂಡೆ ನೆಸೆ, ಡಬ್ಬಿ ನೆಸೆ, ಎಲೆ ಅಡಿಕೆ, ಸುಣ್ಣದ ಕಟ್ಟ್ ಮಾರುವ ಅಂಗ್ಡಿನೂ ಇರ್ತಿತ್. ಉಂಡೆ ನೆಸೆನ ಮುತ್ತುಗದ ಎಲೆಲಿ ಕಟ್ಟಿ ಕೊಡ್ತಿದ್ದೊ.

ಬೆಂಡೆ, ಬದನೆ, ಚೆಟ್ಟ್, ಹಲ್ಸಂಡೆ ಹೀರೆ, ಸೋರೆ, ಸೋಂತೆ, ಹಾಗಲ ಪಟ್ಲಕಾಯಿ, ಬಸಳೆ ಹಿಂಗೆ ಹೆಸ್ರ್ ಹೇಳ್ರೆ ಎಷ್ಟೋ ರೀತಿ ತರಕಾರಿಗಳ ಅಂಗ್ಡಿ ಹೆಜ್ಜೆ ಹೆಜ್ಜೆಗೂ. ಕೆಲವ್ ಸಣ್ಣ ವ್ಯಾಪಾರಿಗ ಹುಣ್ಸೆಹುಳಿ, ಬೆಳ್ಳುಳ್ಳಿ, ಕಾಯಿ ಮೆಣ್ಸ್‌ನೆಲ್ಲಾ ಗುಡ್ಡೆ ಹಾಕಂಡ್ ಒಂದ್ ಗುಡ್ಡೆಗೆ ಇಷ್ಟ್‌ಂತ ರೇಟ್ ಹೇಳ್ತಿದ್ದೊ.

ಸಂತೆ ಮಾಳಲಿ ಈ ಕಡೆಂದೇ ಹೋಕು, ಆ ಕಡೆಂದೇ ಹೋಕುಂತೇಳ್ವ ನಿಯಮ ಎಂತನೂ ಇಲ್ಲೆ. ಎಲ್ಲಿಂದಾರ್ ನುಗ್ಗಕ್, ಎಲ್ಲಿಂದಾರ್ ದಾಟಕ್. ಜನಗ ಹೆಟ್ಟಿಕಂಡ್, ಕುಟ್ಟಿಕಂಡ್, ರಟ್ಟಿಕಂಡ್ ವ್ಯಾಪಾರ ಮಾಡಿವೆ. ಬೇಸಗೆಲಿ ರಣಬಿಸ್ಲ್. ಮಳೆಗಾಲಲಿ ಹುಚ್ಚ್ ಮಳೆ. ಗಾಳಿ ಬೀಸಿರಂತೂ ಯಾವ ಟಾರ್ಪಾಲೂ ಲೆಕ್ಕಕ್ಕಿಲ್ಲೆ. ವ್ಯಾಪಾರಿಗಳಿಗೆ ಕಷ್ಟ, ಗಿರಾಕಿಗಳಿಗೆ ನರಕ. ಸಂತೆಲಿ ಪರಿಚಯದವ್, ಸಂಬಂಧಿಕರ್ ಮನಿ ಸಿಕ್ಕಿರಂತೂ ಅಲ್ಲೇ ಸಿಕ್ಕಿದಲ್ಲೇ ಮಾತ್ ಮಾತ್ ಮಾತ್! ಕೊಡೆ ಬುಡ್ಸಿಕಂಡ್ ನಿತ್ತರಂತೂ ದಾಟವುಕೆ ದಾರಿ ಬುಡಿಕಿಲೆ. ಇಡೀ ಸಂತೆಲಿ ಗುಜು ಗುಜು ಸದ್ದ್. ವ್ಯಾಪಾರಿಗಂತೂ ಕರ್ದ್ ಕರ್ದ್ ವ್ಯಾಪಾರ ಮಾಡಿವೆ. ನಾಕಾಣಿಗೆ ನಾಕ್, ಎಂಟಾಣಿಗೆ ಹತ್ತ್, ಆಫ್‌ರೇಟ್ ಚೀಪ್ ರೇಟ್‌ಂತ ಕರ್ದ್ ಕರ್ದ್ ಹೇಳ್ತಿದ್ದವೆ. ಹಿಂದೆಲ್ಲಾ ನಾಕಾಣಿ, ಎಂಟಾಣಿ, ಒಂದ್ ಎರಡ್ ರೂಪಾಯಿದೇ ವ್ಯಾಪಾರ. ವ್ಯಾಪಾರಿಗ ದುಡ್ಡುನ ಚೀಲದ ಕೆಳಗೆ ಎಳ್ದ್ ಎಳ್ದ್ ಹಾಕಂಬತಿದ್ದೊ. ದುಡ್ಡುನ ಲೆಕ್ಕ ಮಾಡ್‌ವಷ್ಟ್ ಪುರುಷೊತ್ತು ಆಗಳೂ ಇತ್ತ್‌ಲೆ. ಈಗಳು ಇಲ್ಲೆ. ಆಗೆಲ್ಲಾ ಬರೀ ಚಿಲ್ಲರೆ ಜಾಸ್ತಿ. ನೋಟು ಕಾಂಬೊದೇ ಅಪ್ರೂಪ. ಚಿಲ್ಲರೆ ಇದ್ದ ಕಾಲಲಿ ಮೋಸ ಕಮ್ಮಿ ಇತ್ತ್. ನೋಟು ಬಂದ ಮೇಲೆ ಕಳ್ಳರ್ ಜಾಸ್ತಿ ಆದೊ. 'ಲಂಚ' ಬೇಡುವ 'ಭಿಕ್ಷುಕರ್' ಜಾಸ್ತಿ ಆದೊ. ಭ್ರಷ್ಟರ್ ಕಮ್ಮಿ ಆಗುವ ಲಕ್ಷಣನೂ ಕಾಣ್ತಾ ಇಲ್ಲೆ.

ಆಗೆಲ್ಲಾ ಬೈನೆ ಸೇಂದಿ ಬೇಕಷ್ಟ್ ಇರ್ತಿತ್ತ್. ಹಂಗೆ ಕಾಟಿ ಸಾರಾಯಿ

ಅಂಗ್ಡಿಯೂ ಇರ್ತಿತ್ತ್. ಕೆಲವ್ ಜನ ತೊಂಬೆ ತೇಲುವಷ್ಟ್ ಕುಡ್ದ್ ಓಲಾಡಿಕಂಡ್, ಕುದ್ದಲ್ಲೇ ಜೂಂಗಿಕಂಡ್ ಮಳೆಯೋ ಬಿಸ್‌ಲೋ ಅಲ್ಲೇ ಬಿದ್ದ್ ಹೋತಿದ್ದೊ.

ಸಂತೆಲಿ ಒಂದುಟ್ಟು ಒಂದಿಲ್ಲೆಂತಿಲ್ಲೆ. ಮಾಸದ ಮಾರ್ಕೆಟ್‌ಲಿ ತರತರದ ಮಾಸ. ಮೀನ್ ಮಾರುವಲ್ಲಿ ಮೀನ್‌ಗಳ್ದೇ ಕಾರ್‌ಬಾರ್. ಯಾವ್ ಯಾವುದೋ ನಮೂನೆ ಮೀನ್‌ಗ, ಎಸಂಡ್‌ಗ, ಕೋಟೆಗ ಇರ್ತಿದ್ದೊ. ಮೀನ್ ತಕಣದಿದ್ದರೂ ಪರ್ವಾಗಿಲ್ಲೆ. ತರತರದ ಮೀನ್‌ಗಳ್ನ ನೋಡಿಕಾರೂ ಅಲ್ಲಿಗೆ ಹೋಕು. ಕಣ್ಣಿಗೆ ಕಂಡದರೆಲ್ಲಾ ತಕಂಬಕೂತಾದೆ. ತಕಂಡಂಗಲ್ಲ, ಬುಟ್ಟಂಗಲ್ಲ. ಬ್ಯಾಗ್ ಭರ್ತಿ ಮಾಡಿಕಂಡ್ ಸಂತೆಂದ ಹೊರಗೆ ಬಾಕನ ವ್ಯಾನ್‌ನಂವ, ಜೀಪುನಂವ ಬರ್ ಬುರ್ ಸದ್ದ್ ಮಾಡಿ ಹೊರ್ಟಂಗೆ ಮಾಡ್ದು, ಹೊರ್ಡುದುಲೆ. ಅಂಥಾ ವಾಹನ ಹತ್ತಿದವರ ಗೋಳೋ ಗೋಳು.

ಸಂತೆಂದ ಸಾಮಾನ್ ಮಾಡಿಕಂಡ್ ಹೊರಗೆ ಬಂದ ಕೆಲವ್ ಜನ ಸಾಮಾನ್ ಚೀಲದ ಬಾಯಿ ಕಟ್ಟಿ ತಲೆ ಮೇಲೆ ಹೊತ್ತ್‌ಕಂಡ್ ನಡ್ದವೆ. ಮತ್ತೆ ಕೆಲವ್ ಜನ ಎರ್ಡೂ ಕೈಗಳ್‌ಲಿ ಎರ್ಡ್ ಬ್ಯಾಗ್‌ನ ನೇಚಿಕಂಡ್ ಕಂಕುಳ್‌ಲಿ ಕೊಡೆನ ಸೆಕ್ಕಿಕಂಡ್ ನಡ್ದವೆ. ದಾರಿಲಿ ಕೊಡೆ ಜಾರಿ ಬಿದ್ದರೂ ಗೊತ್ತಾಕಿಲೆ. ಇನ್ನ್ ಕೆಲವ್ ಜನ ಕೊಕ್ಕೆ ಕೊಡೆನ ಕುತ್ತಿಗೆ ಹಿಂದೆ ಕಾಲರ್ ಪಟ್ಟಿಗೆ ಸೆಕ್ಕಿಕಂಡ್ ಹೊರ್ಟವೆ. ಕೆಲವ್ ಹೆಣ್ಮಕ್ಕ ಬಿಂದಿಗೆನ ಸೊಂಟಲಿ ಇಸಿಕಂಡಂಗೆ ಬ್ಯಾಗ್‌ನ ಇಸಿಕಂಡ್ ತಬ್ಬಿ ಹಿಡ್ಕಂಡ್ ನಡ್ದವೆ. ಅಲ್ಲಿ, ರಸ್ತೆ ಬರಿಲಿ ವ್ಯಾನ್‌ಗ ಜೀಪುಗ ಹೊರ್ಟಂಗೆ ಮಾಡ್ದು ಹೊರ್ಡುದುಲೆಂತೇಳುವ ಸ್ಥಿತಿಲಿದ್ದವೆ. ಸುರೂಲಿ ವ್ಯಾನ್ ಹತ್ತಿದವ್‌ಕೆ ಸೀಟ್ ಸಿಕ್ಕಿದ್ದದೆ. ಅಬ್ಬ! ಸಾಕಾತ್‌ತ ಮೊಕ ಪೂಜಿಕಂಡ್ ಕುದ್ದಿದ್ದವೆ. ಹಂಗೂ ಹಿಂಗೂ ಆಗಿ ಆಕನ ವ್ಯಾನ್ ಭರ್ತಿ ಆದೆ. ಸುರೂಲಿ ಹತ್ತಿ ಕುದ್ದವರ ಕುಸಿ ಪೂರಾ ರಟ್ಟಿ ಹೋದೆ. ಅವು ಇವು ಪೂರ ಕುದ್ದವರ ಮೇಲೆ ಬ್ಯಾಗ್‌ಗಳ್ನ ಕುಕ್ಕ್‌ರ್‌ಸಿ ಬುಟ್ಟವೆ. ಕುದ್ದವ್ ಪಜ್ಜಿ ಆದೋಂತೇಳುವ ಸ್ಥಿತಿ. ಕೂರ್ದುಕ್ಕಿಂತ ನಿಲ್ಲುದೇ ವಾಸಿಂತೇಳ್ವಂಗೆ ಆದೆ. ಒಮ್ಮೊಮ್ಮೆ ಗೂಡ್ಸ್ ವ್ಯಾನ್‌ಗಳ್‌ಲಿ ಪ್ರಯಾಣ ಮಾಡುವ ಸಂದರ್ಭನೂ ಬಂದ್‌ಬುಟ್ಟದೆ. ಗೂಡ್ಸ್ ವ್ಯಾನ್‌ಂತೇಳ್ರೆ ಬರೀ ಸಾಮಾನ್‌ಗಳ್‌ನ ಮಾತ್ರ ಸಾಗ್‌ಸುವ ವ್ಯಾನ್. ಕಿಡಿಕೆನೇ ಇಲ್ಲದ ಅಂತಾ ವ್ಯಾನ್‌ಲಿ ಪ್ರಯಾಣ ಮಾಡ್ದು ಅಷ್ಟ್ ಸುಲಭದ ಮಾತಲ್ಲ. ಕುರಿಗಳ್ನ ತುಂಬಿದಂಗೆ ಜನರ್‌ನ ತುಂಬಿರೆ ಹೆಂಗಾದು ಹೇಳಿ?

ನಮಿಗೆ ಗತಿಯಿಲ್ಲೆ, ಅವುಕೆ ಮತಿಯಿಲ್ಲೆ. ಸಿಕ್ಕಿದರ್‌ಲಿ ಹತ್ತಿ ಹೋಕು. ಕುದ್ದಂಗಲ್ಲ, ತಲೆ ಎತ್ತಿ ನಿತ್ತಂಗಲ್ಲ, ಬಗ್ಗಿಕಂಡ್ ಎಷ್ಟ್ ಹೊತ್ತುಂತ ನಿಲ್ಲುದು? ಕೊಂಬುಗೆ ಬಳ್ಳಿ ಹಾಕಿ ತುಂಡಾಗಿ ಎಳ್ದ್ ಗೂಟಕೆ ದನನ ಕಟ್ಟಿದಂಗೆ ಬಗ್ಗಿಕಂಡೇ ನಿಲ್ಲೊಕು. ಶೆಕೆ, ಉರಿ, ಧಗೆತ ಜನ ಬಾಯಿ ಬಡ್ಕಂಡವೆ. ದುಡ್ಡು ತೆಗೆನಿ, ದುಡ್ಡು ತೆಗೆನಿತ ವ್ಯಾನ್‌ನವ ದುಡ್ಡು ಕೇಳ್ತಾ ಇದ್ದದೆ. ಬ್ಯಾಗ್‌ನ ಹಿಡ್ಕಂಡಂಗಲ್ಲ, ದುಡ್ಡು ಕೊಟ್ಟಂಗಲ್ಲ, ತಲೆಲಿ ತೊಪ್ಪಿ ಬೇರೆ! ಇಂತಾ ನರಕ ಬ್ಯಾಡಾಂತೇಳಿ ಇನ್ನೊಮ್ಮೆ ಬಸ್ಸ್ ಮನಿ ಹತ್ತಿಕೆ ಹೋದರೆ ಬಸ್ಸ್‌ಲೂ ಸನ ಕಾಲ್ ಊರಿಕೆ ಜಾಗ ಇಲ್ಲೆ. ಇನ್ನ್ ಕೂರುವ ಮಾತೆಲ್ಲಿ? "ಅಯ್ಯೋ ನನ್ನ ಕಾಲ್, ಯಾಂವನೋ ಬೂಟ್ ಕಾಲ್‌ಲಿ ಮೆಟ್ಟಿ ಬುಡ್ತ್. ಚಕ್ಕಳ ಜಾರ್ತ್ತ ಕಂಡದೆ. ಹಂಞ ಸೆರೆ ಬುಡಿಯಪ್ಪಾ ಉಸ್ರ್ ಕಟ್ಟಿದೆ. ಓ ನನ್ನ ಬ್ಯಾಗ್‌ನ ಮೆಟ್ಟ್‌ಬೇಡಿ. ಎಣ್ಣೆ ಕುಪ್ಪಿ ಮೊಗ್‌ಚಿತ್‌ತ ಕಂಡದೆ. ಬಸ್ಸ್‌ನವುಕೆ ಸಂತೆ ದಿನನಾರೂ ಹೆಚ್ಚ್ ಬಸ್ಸ್ ಬುಡಿಕೆ ಕೇಡು"ತ ಜನ ಬಯ್ಕಂಡವೆ. ಅಷ್ಟ್ ಹೊತ್ತ್‌ಗೆ ಕಂಡೆಕ್ಟರ್ ಬಂದ್‌ಕಂಡ್ ಜನರ್‌ನ ಮುಂದೆ ಹೋಗಿ ಮುಂದೆ ಹೋಗಿಂತೇಳ್ಕಂಡ್ ಜನ್‌ರ್‌ನ ಎಳ್ದ್, ಉಂದಿ ಉಂದಿ ನಿಲ್ಸಿದೆ. "ರ್ರೀ ಈ ಕಡೆ ಬನ್ರಿ, ಆಚೆ ಹೋಗ್ರಿ, ಏ ಹೋಗಯ್ಯ ನಿಂಗೇ ಹೇಳ್ತಾ ಇರೋದು"ತ ಹೇಳಿಕಂಡ್ ಒಂದ್ ಇಂಚೂ ಸೆರೆ ಇಲ್ಲದಂಗೆ ನಿಲ್ಸಿರೆ ಪರಿಸ್ಥಿತಿ ಏನಾಗ್‌ಬ್ಯಾಡ. ಕಾಲ್ ಸೆರೆಲಿದ್ದ ಬ್ಯಾಗ್ ಎಲ್ಲಿ ಬಿದ್ದು ಹೋದೆಯೋತ ಎಚ್ಚರ ಮಾಡಿಕಣೊಕು, ಇಳಿವ ಜಾಗ ಎಲ್ಲಿತ ನೋಡಿಕಣೊಕು, ಕಂಡೆಕ್ಟರ್ ಬ್ಯಾರೆ ಹೀನಾ ಮಾನ ಬಯ್ತಾ ಇದ್ದದೆ. ಸಂತೆಲಿ ಅಣ್ಣಾ, ಅಕ್ಕಾ, ಸಾವುಕಾರ್ರೆ, ಯಜಮಾನ್ರೆತೆಲ್ಲಾ ಕರ್‍ಸಿಕಂಡವ್ ಇಲ್ಲಿ ಬಸ್ಸೊಳಗೆ ಹಿಂಗೆಲ್ಲಾ ಹೇಳ್ಸಿಕಂಬುದು ಎಸ್ಟ್ ಸರಿತ ಜನ ಗ್ಯಾನ ಮಾಡಿಕಂಡಿರಕನ ಏನಾತ್? ಈ ಕುತ್ತಿಗೆ ಮುಟ್ಟ ಉಂಡವುಕೆ ಉಬ್ಬೆಸ ಆದೆಲ್ಲಾ ಹಂಗೆ ಬಸ್ಸ್‌ಲಿ ಜನ ಜಾಸ್ತಿ ಆಗಿ ಬಸ್ಸ್ ಬುಸುಗುಟ್ಟಿಕಂಡ್ ಮೊಟ್ಟೆ ಹತ್ತ್‌ತಿತ್. ಮೊಟ್ಟೆಂತೇಳ್ರೆ ಚಡಾವ್. ಮೊಟ್ಟೆ ಹತ್ತಿಕೆ ಬೊತ್ತದೆ ಬಸ್ಸ್ ಹಿಂದೆ ಹಿಂದೆ ಜಾರಿಕೆ ಸುರಾತ್. ಜನ 'ಹೋ' ತೇಳಿ ಬೊಬ್ಬೆ ಹಾಕಿದೊ. ಹೆಂಗೋ ಅಂತೂ ಬಸ್ಸ್ ಹಿಂದೆ ಹಿಂದೆ ಜಾರಿ ನಿತ್ತತ್. ಹಿಂದೆ ಇರೋವ್ ಇಳೆನಿ, ಬೇಗ ಬೇಗ ಇಳೆನಿತ ಡ್ರೈವರ್ ಹೇಳ್ದೆ. ಹತ್ತಿಪ್ಪತ್ತ್ ಜನ ಇಳ್ದವೆ. ಬಸ್ ಮೆಲ್ಲ ಮೆಲ್ಲ ಮೊಟ್ಟೆ ಹತ್ತಿದೆ. ಬಸ್ಸ್‌ಂದ ಇಳ್ದವ್ ಅದರ ಹಿಂದೆಂದ ಓಡಿಕಂಡ್ ಹೋದವೆ. ಮೊಟ್ಟೆ ಹತ್ತಿದ

ಬಸ್ಸ್ ನಿತ್ತದೆ. ಡ್ರೈವರ್ ಹಿಂದೆ ತಿರ್‌ಗಿಕಂಡ್ ಬೇಗ ಬನ್ನಿತ ಕರ್ದದೆ. ವಯಸ್ಸಾದವುಕೆ ಬ್ಯಾಗ್ ಹೊತ್ತ್‌ಕಂಡ್ ಓಡಿಕೆ ಆದೆನಾ? ಇದೆಲ್ಲಾ ನಮ್ಮ ಹಣೆ ಬರಂತೇಳಿಕಂಡ್ ಓಡಿಕಂಡ್ ರಟ್ಟಿಕಂಡ್ ಬಂದ್ ಬಸ್‌ಹತ್ತಿ ನಿತ್ತವೆ. ಬಸ್ಸ್ ಹೊರ್ಟದೆ.

ಪ್ರೈವೆಟ್ ಬಸ್ ಆಗಿದ್ದರೆ ಅದರ್‌ಲಿ ಕ್ಲೀನರ್ ಹೈದಂತ ಒಬ್ಬ ಸಹಾಯಕ ಇದ್ದದೆ. ಬಸ್ಸ್ ನಿತ್ತ ಕೂಡ್ಲೆ ಚಕ್ರಕ್ಕೆ ಮರದ ಕಟ್ಟೆ ಕೊಟ್ಟದೆ. ಬಸ್ಸ್ ಹತ್ತವ್ ಇದ್ದರೆ ಅವರ್ನ ಕುಸೀಂದ ಕರ್ದ್ ಮಾತಾಡ್ಸಿ, ಅವರ ಕೈಲಿರುವ ಬ್ಯಾಗ್‌ನ ಅವನೇ ತಕ್ಕಂಡ್ ಒಳಗೆ ಇಸಿದೆ. ದೊಡ್ಡ ಹೊರೆ ಮನಿ ಇದ್ದರೆ ಬಸ್ಸ್ ಮೇಲೆ ಎಳ್ದ್ ಹಾಕಂಡದೆ. ಸಣ್ಣ ಮಕ್ಕ ಇದ್ದರೆ ಅವರ್ನ ಎತ್ತಿ ಬಸ್ಸ್ ಒಳಗೆ ಬುಟ್ಟದೆ. ಬಸ್ಸ್ ಇಳಿವಲ್ಲಿ ಲಗೇಜ್‌ನ ಇಳ್ಸಿ ಕೊಟ್ಟದೆ. ಆ ಕ್ಲೀನರ್ ಹೈದಂತೇಳ್ರೆ ನಮ್ಮ ಮನೆ ಹೈದಂತೇಳುವಂಗೆ ಪ್ರೀತಿನ ತೋರ್‌ಸ್‌ತಿದ್ದೊ. ಆ ಹೈದನೂ ಅಷ್ಟೇ, ಜನರ್ನ ಪ್ರೀತಿಂದ ಕಾಂಬತಿತ್ತ್. ಆ ಬಸ್ಸ್ ತನ್ನ ಸ್ವಂತದ್‌ತ ಕಾಂಬತಿತ್. ಬಸ್ಸ್‌ನ ಮೀಸಿ ಅದ್ರ ಚೆಂಡಿ ತೆಗ್ದ್, ಅದ್ಕೆ ಹೂವ್ ಮುಡ್ಸಿ, ಊದ್‌ಪತ್ತಿ ಹೋಸಿ, ಇಡೀ ಬಸ್ಸ್ ಗಮ್‌ಗಮಾಂತೇಳುವಂಗೆ ಮಾಡಿ, ಭಕ್ತಿಗೀತೆ ಹಾಕ್‌ತಿತ್ತ್. ಒಮ್ಮೆ ಆ ಬಸ್ಸ್‌ಲಿ ಹೋದರೆ ಪುನಾ ಅದೇ ಬಸ್ಸ್‌ಲಿ ಹೋಕುಂತಾತಿತ್ತ್. ಡ್ರೈವರೂ ಅಷ್ಟೆ. ಜನ ಮಾಮೂಲಿ ನಿಲ್ಲುವ ಜಾಗ ಬಾಕೆ ಎಷ್ಟೋ ದೂರಂದಳೇ "ಪೋಂಯ್ ಪೋಂಪೊಂಯ್ ಪೋಂಯ್"ತ ಹಾರ್ನ್ ಮಾಡ್ತಿತ್ತ್. ಯಾರ್‍ನೂ ಬುಟ್ಟ್ ಹೋತಿತ್‌ಲೆ. ಹಿಂದೆ ಬಾಗ್ಲಂದ ಹತ್ತಿಕೆ ಬೊತ್ತದಿದ್ದರೆ ಡ್ರೈವರ್ ಬಾಗ್ಲಂದ ಎಳ್ದ್ ಹತ್ತಿಸಿಕಂಬತಿತ್ತ್. ಡ್ರೈವರ್, ಕಂಡೆಕ್ಟರ್, ಕ್ಲೀನರ್ ಎಲ್ಲವೂ ಸಮಾಧಾನಂದ ಕರ್ತವ್ಯ ಮಾಡ್ತಿದ್ದೊ. ಇದ್ ಹತ್ತ್ ಐವತ್ತ್ ವರ್ಷಗಳ ಹಿಂದೆನ ಸ್ಥಿತಿಗತಿನ ನಾ ಹೇಳ್ತಾ ಒಳದ್. ಯಾಗ ಕೆಂಪು ಬಸ್ಸ್‌ಗಳ ಓಡಾಟ ಸುರಾತೋ ತಕ್ಕಣಿ ಎಲ್ಲ ಬದ್ಲಾತ್. ಬಸ್ ಬಂದರೆ ಬಾತ್. ಇಲ್ಲರೆ ಇಲ್ಲೆ. ಬಂದರೆ ಎಲ್ಲ ಒಟ್ಟಿಗೆ. ಇಲ್ಲರೆ ಒಂದೂ ಇಲ್ಲೆ. ಒಮ್ಮೆ ಇಲ್ಲಿ ನಿತ್ತರೆ ಮತ್ತೊಮ್ಮೆ ಓ ಅಲ್ಲಿ ನಿತ್ತದೆ. ನೀತಿ ನಿಯಮ, ಮನುಷ್ಯತ್ವ ಎಂತನೂ ಇಲ್ಲೆ. ಬರೀ ವ್ಯವಹಾರ ಮಾತ್ರ. ನಗೆ ಮೊಕ ಕಾಂಬಕಿಲೆ. ಹತ್ತ್‌ದಪ ಆ ಬಸ್ಸ್‌ಲಿ ಓಡಾಡಿರೂ ಪರಿಚಯನೇ ಇಲ್ಲದಂಗೆ ಇದ್ದವೆ. ಅದೆಲ್ಲಾ ಇರ್‌ಲಿ, ಸಂತೆಂದ ಹೊರ್‌ಟ ಜನ ಕೆಂಪು ಬಸ್ಸ್ ಹತ್ತಿದ ಕಥೆನ ಹೇಳ್ತಾ ಇದ್ದೆ ನೋಡಿ, ಸರಿ, ಕಂಡೆಕ್ಟರ್ ದುಡ್ಡು ಕೇಳ್ತಲ್ಲ, ಆಗ ಜನ

ಜೋಬಿಗೆ ಕೈ ಹಾಕಿದೊ. ಆ ರಶ್‌ಲಿ ಯಾರ್‍ದ್ದೊ ಕೈ ಇನ್ಯಾರ್‌ದೊ ಜೋಬೊಳಗೆ. ಕಳ್ಳರ್‌ಗೆ ಸಂತೆ ದಿನ ಒಳ್ಳ ವ್ಯಾಪಾರ. ಟಿಕೆಟ್‌ಗೆ ದುಡ್ಡು ಕೊಡೊಕೊರೆ ಹೊತ್ತೆಷ್ಟ್? ಬಸ್ಸ್‌ಗೇಂತ ಕೊಡಿಕೆ ದುಡ್ಡುನ ಜೋಡ್ಸಿಕಂಬೊದುಲೆ. ಅಲ್ಲಿ ಕೆಲವ್ ವಾದಕೆ ಶುರು ಮಾಡಿಕಂಡವೆ. ಅದೆಂತಕೆ ಅಷ್ಟ್ ದುಡ್ಡು? ಹಂಞ ಕಮ್ಮಿ ಮಾಡಿಕಣಿತೇಳ್ರೆ ಕಂಡೆಕ್ಟರ್ ಕಮ್ಮಿ ಮಾಡ್ದೆನಾ? "ಸಂತೆಲಿ ಚೌಕಾಸಿ ಮಾಡ್ದಂಗೆ ನನ್ನೊಟ್ಟಿಗೆ ಚೌಕಾಸಿ ಮಾಡ್‌ಬೇಡಿ"ಂತ ದಬಾಯಿಸಿ ದುಡ್ಡುನ ವಸೂಲ್ ಮಾಡ್ತಿತ್ತ್. ಅಷ್ಟೊತ್ತಿಗೆ ಆ ದೊಡ್ಡ ತಿರ್‌ಗಾಸ್‌ಲಿ ಚೆಕಿಂಗ್‌ನವ್ ಬೇರೆ ಬಸ್ ಹತ್ತಿದೊ. ಅವು ಟಿಕೆಟ್ ಕೇಳ್ರೆ ಎಲ್ಲಿಂದ ಕೊಡ್ದು? ಆ ರಶ್‌ಲಿ ಟಿಕೆಟ್‌ನ ಎಲ್ಲಿ ಹಾಕೊಳೊ ಏನೊ? ಒಂದ್ ಕಡೆಂದ ಸೆಕೆ. ಬೆಗ್‌ರ್ ಹರಿತಾ ಇದ್ದದೆ. ಗಾಳಿ ಬಾಕೆ ಜಾಗನೇ ಇಲ್ಲೆ. ಕುಡ್ಕರ್ ಕೆಲವಂತೂ ಮೈಮೇಲೆ ಬಿದ್ದಂಗೆ ಆಡ್ತಾ ಇದ್ದವೆ.

ಆ ಸಂದಿಲಿ ಬೀಡಿ ಸೇದುದು ಬೇರೆ. ಎಲೆ ಅಡಿಕೆ ಬಾಯಿಲಿ ತುಂಬಿಸಿಕಂಡವ್ ಮೊಕ ಮೈಗೆಲ್ಲಾ ಮಡೆ ರಟ್ಟಿಸಿಕಂಡ್ ಮಾತಾಡ್ತಾ ಇದ್ದವೆ. ತಲೆಗೆ ಹಾಕಿದ ಎಣ್ಣೆ ಪೂರಾ ಕೆನ್ನೆಗಾಗಿ ಇಳ್ದ್ ಎದ್ರ ಇದ್ದವರ ಮೈ ಮೊಕತ್ತೇಳದೆ ಪೂಜಿ ಹೋದೆ. ಇದೆಲ್ಲಾ ನರಕ ಅಲ್ಲದೆ ಮತ್ತೆಂತಾ? ಆಗೆಲ್ಲಾ ಬೀಡಿ ಸಿಗರೇಟ್ ಸೇದವ್‌ಕೆ ಯಾವ ಕಟ್ಟ್ ಪಾಡೂ ಇತ್ತ್‌ಲೆ. ಜನ ಅನಾಗರಿಕರಂಗೇ ವರ್ತನೆ ಮಾಡ್ತಾ ಇದ್ದೊ. ಸಿಕ್ಕಿದ ಕಡೆಯೆಲ್ಲಾ ಕಾಂಕ್ರ್‌ಸಿ ಉಗಿಯೊದು, ಬೀಡಿ ಸಿಗರೇಟ್‌ನ ಸೇದಿ ಕೆಡ್ಸದೆ ಬಿಸಾಕುದೆಲ್ಲಾ ಮಾಡ್ತಿದ್ದೊ. ಅದ್ ಇರ್‌ಲಿ, ಆ ರಶ್‌ಲಿ ಬಸ್ಸ್ ಇಳಿಯವ್ರ ಕಥೆ ಕೇಳಿ. "ಬಸ್ಸ್ ನಿಲ್ಸಿ, ನಿಲ್ಸಿ ಒಮ್ಮೆ" ಂತ ಬೊಬ್ಬೆ ಹಾಕಕನ ಬಸ್ಸ್ ಎಷ್ಟೋ ಮುಂದೆ ಹೋಗಿ ನಿತ್ತದೆ. ಆ ಬಸ್ಸ್‌ಗೆ ಇರುದು ಹಿಂದೆ ಒಂದೇ ಬಾಗ್ಲ್. ಬಸ್ಸ್ ನಡೂಲಿ ಇರಂವ ಹಿಂದೆ ಬಾಗ್ಲ್ ಇರುವಲ್ಲಿಗೆ ಬ್ಯಾಗ್ ಎಳ್ಕಂಡ್, ಚಪ್ಪಲ್ ಹುಡ್ಕಿಕಂಡ್ ಬಂದ್ ಎತ್ತಕನ ಹೊತ್ತೆಷ್ಟ್? ಹೌದು, ನಮಿಗೆ ಬಸ್ ಹತ್ತುವ, ಬಸ್ಸ್ ಇಳಿವ ವಿಚಾರ ಗೊತ್ತಿರೊಕು. ಅಷ್ಟ್ ದೂರ ಇರಕನೇ ಬಾಗ್ಲ್ ಹತ್ರ ಬಂದ್ ನಿತ್ತ್‌ಕಣೊಕು. ಇಂತಾ ವಿಚಾರಗಳ್ನೆಲ್ಲಾ ಮಕ್ಕಳಿಗೆ ಹೇಳಿಕೊಡುವ ಜವಾಬ್ದಾರಿ ಹಿರಿಯವುಕೆ ಸೇರಿಟು.

* * * * *

ಅವ್ವ ಅಂಗ್ಡಿಗೋ, ಸಂತೆಗೋ ಇಲ್ಲರೆ ನಂಟ್ರ ಮನೆಗೊ ಹೋಗಿ ಬಾದುನೇ

ಮಕ್ಕ ದಾರಿ ಕಾದ್‌ಕಂಡ್ ಕೂರ್ತಿದ್ದೊ. ಹೇಳ್ದ ಹೊತ್ತಿಗೆ ಮನಿ ಅವ್ವ ಬಾರದಿದ್ದರೆ ಅಯ್ಯೋ ಆ ಸಂಕಟನ ಹೇಳಿಕಂಬಕಾದುಲೆ. ಆ ಮಕ್ಕಳೊಟ್ಟಿಗೆ ನಾಯಿನೂ ಕುತ್ತ ಕುದ್ದ್‌ಕಂಡ್ ಪಾರಕಾದದೆ. ಹಗ್ಲ್ ಏನಾರ್ ಒಂಥರಾ ಮೋಡದ ವಾತಾವರಣ ಇದ್ದರಂತೂ ಬೇಜಾರ ಆದಂಗಾಗಿ ಮಕ್ಕಳಿಗೆ ದುಕ್ಕ ಬಂದ್‌ಬುಟ್ಟದೆ.

ಕತ್ತಲೆ ಕತ್ತಲೆ ಆಕನಂತೂ ಮಕ್ಕ ಮರ್ಟ್‌ಕಂಡ್ ಕುದ್ದವೆ. ಒಂದ್ ಹೊತ್ತ್‌ನ ಊಟ ಇಲ್ಲರೂ ಆದು ಅವ್ವಂತೂ ಒಟ್ಟಿಗೇ ಇರೊಕು.

ಅವ್ವ ಮನೆಲೇ ಉಟ್ಟು, ಅಪ್ಪ ಸಂತೆಂದ ಬಾಕಾತ್‌ತ ತಿಳ್ಕಣಿ. ಮಕ್ಕಳಿಗೆ ರೆಕ್ಕೆ ಪುಕ್ಕ ಬಂದಂಗೆ ಕೊಣ್ದಾಡಿವೆ. ಅಪ್ಪ ಬಂದ್ ಉಬ್ಬುಲು ತೆಗೆವ 'ಲಡಬಡ' ಸದ್ದ್ ಕೇಳ್ದ ಕೂಡ್ಲೆ ಮಕ್ಕಳೂ ಆ ಮಕ್ಕಳೊಟ್ಟಿಗೆ ನಾಯಿನೂ ಉಬ್ಬುಲತ್ರ ಓಡಿಬುಟ್ಟವೆ. ನಾಯಿಯಂತೂ ಅಪ್ಪನ ಎದೆ ಮೇಲೆ ಇಲ್ಲರೆ, ಬೆನ್ನ್ ಮೇಲೆ ಕಾಲ್ ಮಡ್ಗಿಯೋ, ಕಾಲ್ ಸಂದಿಗಾಗಿ ನುಗ್ಗಿಯೋ, ಕಂಯ್ ಕುಂಯ್‌ತೇಳಿ ಕುಸಿ ಪಟ್ಟದೆ. ಮಕ್ಕ ಅಪ್ಪನ ಕೈಲಿದ್ದ ಬ್ಯಾಗ್‌ನ ಹಿಡ್ಕಂಡ್ ಅಪ್ಪನೊಟ್ಟಿಗೆ ಮಾತಾಡಿಕಂಡ್ ಕುಣು ಕುಣುತ ನಡ್ಕಂಡ್ ಬಂದವೆ. ಅಷ್ಟೊತ್ತಿಗೆ ನಾಯಿ ಮನೆಗೆ ಓಡಿ ಅವ್ವನ ಮುಂದೆ ಕುಂಯ್‌ಗುಟ್ಟಿ ಪುನಾ ಅಪ್ಪ ಮಕ್ಕಳೊಟ್ಟಿಗೆ ಸೇರಿಕಂಡ್ ತಾನೂ ಸಂತೆಗೆ ಹೋಗಿದ್ದೆಂತೇಳ್ವಂಗೆ ಕುಸಿಪಟ್ಟ್‌ಕಂಡ್ ಬಂದದೆ. ಹಿಂಗೆ ಎಲ್ಲವೂ ಮನೆಗೆ ಬಂದಂಗೆ ಸಂತೆ ಬ್ಯಾಗ್‌ಲಿ ಏನುಟ್ಟು ಏನಿಲ್ಲೆತ ತನಿಖೆ ಶುರಾದೆ.

ಅವ್ವ ಬ್ಯಾಗ್‌ಂದ ಒಂದೊಂದೇ ಸಾಮಾನ್ ಕಟ್ಟ್‌ನ ತೆಗ್ದದೆ. ಸಾಮಾನ್‌ಗಳ್ನ ಕಾಗದಲಿ ಸುತ್ತಿ ಗೋಣಿ ನಾರ್‌ಲಿ ಕಟ್ಟಿದ್ದವೆ. ಬ್ಯಾಗ್ ಮುಂದೆ ಮಕ್ಕಳಿಗೆ ಕೂರಿಕೆ ಅಧಿಕಾರ ಉಟ್ಟು. ಆದರೆ ಬ್ಯಾಗ್‌ಗೆ ಕೈ ಹಾಕುವ ಅಧಿಕಾರ ಅವ್ವಂಗೆ ಮಾತ್ರ ಇರ್ದು! ಯಾಕೆತೇಳ್ರೆ ಮಕ್ಕ ಬ್ಯಾಗ್‌ಗೆ ಕೈ ಹಾಕಿರೆ ಅದ್ ಇದ್‌ಂತೆಲ್ಲಾ ಎಳ್ದ್ ಹಾಕಿ ಚೆಲ್ಲಾಪಿಲ್ಲಿ ಮಾಡಿಬುಟ್ಟವೆ. ಹಂಗಾಗಿ ಮಕ್ಕಳೂ ಅಪ್ಪ ಅವ್ವಂಗೆ ಬೆಲೆ ಕೊಟ್ಟ್ ಬ್ಯಾಗ್‌ನೇ ನೋಡಿಕಂಡ್ ಕುಸಿಪಟ್ಟವೆ.

ಹುತ್ತಂದ, ಇಲ್ಲರೆ ಮರದ ಪೋಟೆಂದ ಮೆಲ್ಲ ಮೆಲ್ಲ ಒಂದೊಂದೇ ಜೇನ್ ಎರಿನ ತೆಗ್ದವಲ್ಲ ಹಂಗೆ ಅವ್ವ ಬ್ಯಾಗ್‌ಂದ ಒಂದೊಂದೇ ಸಾಮಾನ್ ಕಟ್ಟ್‌ನ ತೆಗ್ದ್ ತೆಗ್ದ್ ನೆಲಲಿ ಇಸಿದೆ. ಆ ಸಾಮಾನ್ ಕಟ್ಟ್‌ಗಳೋ ಎಲ್ಲಾ ಸಣ್ಣ ಸಣ್ಣ ಕಟ್ಟ್‌ಗಳೇ ಇರ್ದು. ಕೆಲವ್ ಕಟ್ಟ್‌ಗಳ್ನ ಅಲ್ಲಾಡ್ಸಿ ನೋಡಿವೆ, ಇನ್ನ್ ಕೆಲವುನ

ಮೂಸಿ ನೋಡಿವೆ, ಮತ್ತೆ ಕೆಲವ್‌ನ ಹಿಂಚಿ ನೋಡಿವೆ, ಬಿಚ್ಚಿ ನೋಡಿವೆ, ಹರ್ದ್ ನೋಡಿವೆ. ಜೀರಿಗೆ, ಸಾಸಿವೆ, ಎಳ್ಳ್, ಮೆಂತೆ, ಇಂಗ್, ಬೇಳೆ, ಹುರಿಗಡ್ಲೆ, ಹೊರ್ಕುಲು, ಕುಡು, ವಾಮದಕ್ಕಿ, ಒಣ್‌ಂಗಿಲ್ ಮೀನ್, ಬಟ್ಟೆ ಕರ್ಪೂರ, ಸಾಂಬ್ರಾಣಿ, ನೂಲುಂಡೆ, ಕೊಂಡಿ, ಎಲಡಿಕೆ, ಹೊಸೊಪ್ಪು, ಸಾಬೂನ್, ಬೆಂಕಿಪಟ್ನ ಹಿಂಗೆ ಎಂತೆಂತದೋ ಸಾಮಾನ್‌ಗ. ಅದ್ರೊಟ್ಟಿಗೆ ಒಳ್ಳೆಣ್ಣೆ, ತೆಂಗ್ನೆಣ್ಣೆ ಕುಪ್ಪಿಗ. ಆ ಕುಪ್ಪಿಗಳಿಗೆ ತೆಂಗ್‌ನ ಜುಟ್ಟ್‌ದ್ ದಿಮ್ಮಿ. ಸಧ್ಯ ದಿಮ್ಮಿ ರಟ್ಟಿ ಹೋತ್ಲೆ. ಆದರೆ ಒಳ್ಳೆಣ್ಣೆ ಕುಪ್ಪಿ ಮಾತ್ರ ಬಿರ್‌ಕ್ ಬುಟ್ಟಿತ್ತ್. ಅದೆಲ್ಲ ಇರ್‌ಲಿ, ಮಕ್ಕಳ ಕೈಗೆ ಮಿಠಾಯಿ ಕಟ್ಟ್ ಸಿಕ್ಕಿತಾ? ಹೌದು, ಸಿಕ್ಕಿತ್. ಕಟ್ಟ್ ಬುಡ್ಸಿರೆ ಅದರ್‌ಲಿ ಪಟ್ಟೆ ಪಟ್ಟೆ ಇರುವ ಗೋಲಿ ಮಿಠಾಯಿ. ಮಕ್ಕಳಿಗೆ ಬೇಕಾದ್ದೇ ಅದ್.

ಆಗೆಲ್ಲಾ ಇಸ್ಕೂಲಿಗೆ ಹೋಕನ ಅಂಗ್ಡಿಗಳ್‌ಲಿ ಉಂಡೆ ಮಿಠಾಯಿ, ಬೆಳ್ಳಂಗಿರುವ ಕಡ್ಡಿ ಮಿಠಾಯಿ, ಬಿಸ್ಕೆಟ್, ಮಸಾಲೆ ಬಟಾಣಿ, ಹುರಿಗಡ್ಲೆ ಇದೇ ಸಿಕ್ಕ್‌ತಿದ್ದದ್. ಅದರ್ನೆಲ್ಲಾ ಅಗಾಲ ಬಾಯಿ ಇರುವ ಕುಪ್ಪಿಗಳ್‌ಲಿ ತುಂಬ್‌ಸಿ ಇಸ್‌ತಿದ್ದೊ. ಆಗ ಪ್ಯಾರಿಸ್ ಗೀರಿಸ್ ಇತ್‌ಲೆ. ದುಡ್ಡು ಇದ್ದರೆ ಗೋಲಿ ಮಿಠಾಯಿ. ಇಲ್ಲರೆ ಬಾಯಾಡಿಸಿಕೆ ಎಂತಾರ್ ಕಾಡ್ ಹಣ್ಣ್ ಇರ್ತಿತ್. ಹುಣ್‌ಸೊಳಿ ಹಣ್ಣ್, ನೆಲ್ಲಿಕಾಯಿ, ಚಾಕಟೆ ಹಣ್ಣ್, ತಡ್‌ಸ್‌ಲ್ ಹಣ್ಣ್, ಕಕ್ಕಡೆ ಹಣ್ಣ್ ಹಿಂಗೆ ಬ್ಯಾಗೊಳಗೆ ಕೈ ಹಾಕಿ ಬ್ಯಾಗ್‌ದ್ ಮೂಲೆ ಮೂಲೆ ಹುಡ್ಕಿರೆ ಎಂತಾರ್ ಒಂದ್ ಇದ್ದೇ ಇರ್ತಿತ್. ಅದ್ ಯಾವ್ದೂ ಇಲ್ಲರೆ ಹೊರ್ದ ಹುಣ್‌ಸೊಳಿ ಬೀಜ, ಅದಿಲ್ಲರೆ ರಬ್ಬರ್ ಬೀಜಾರ್ ಇರ್ತಿತ್. ಕಟುಕುಟು ಸದ್ದ್ ಮಾಡಿಕಂಡ್ ಕ್ಲಾಸ್‌ಲಿ ಪಾಠ ಕೇಳ್ತಿದ್ದೊ. ಪಾಠ ತಲೆಗೆ ಹತ್ತಿತೋ ಇಲ್ವೊ ಗೊತ್ಲೆ. ಅಂತೂ ನಾಕ್ ಹುಣ್‌ಸೊಳಿ ಬೀಜಂತೂ ಹೊಟ್ಟೆಗೆ ಇಳೆತಿತ್. ಮಾಸ್ಟ್ರಿಗೆ ಗೊತ್ತಾದರೆ ಎರಡ್ ಕಜ್ಜಾಯನೂ ಸಿಕ್ಕ್‌ತಿತ್ತ್. ಆ ವಿಷಯ ಬುಡಿ.

ಈ ಸಿಂಹಿ ತಿಂಡಿ ಮಾರುವ ಅಂಗ್ಡಿ ಮುಂದೆ ನಿಲ್ಲುದೇ ಒಂದ್ ಮಜ. ಆ ಅಂಗ್ಡಿ ಒಳಗೆ ಸುತ್ತ ಕನ್ನಡಿ. ಆ ಕನ್ನಡಿಲಿ ತಿಂಡಿಗಳ್‌ದ್ ಪ್ರತಿಬಿಂಬ. ಅದ್ ಸಣ್ಣ ಅಂಗ್ಡಿಯಾದರೂ ಆ ಕನ್ನಡಿ ದೆಸೆಂದಾಗಿ ದೊಡ್ಡ ಮಿಠಾಯಿ ಅಂಗ್ಡಿಯಂಗೆ ಕಾಂಬತಿತ್. ಆ ವ್ಯಾಪಾರಿ ಎತ್ತರಲಿ ಕೂರ್‌ತಿತ್. ಅಂವನ ಕೈಲಿ ಉದ್ದ ಕಾವ್‌ದ್ ಸೆಡೆ. ಸೆಡೆಂತೇಳ್ರೆ ಸೌಟುಂತ ಅರ್ಥ. ತಿಂಡಿಗಳ್‌ನ ಜೋಡ್ಸಿದರ ನೋಡಿಕೆ

ನಾಕ್ ಕಣ್ ಸಾಲಿಕಿಲೆ. ಆ ಕರೆಂಟ್ ಬೆಳ್ಕ್‌ಲಿ ಬೂಂದಿ, ಮೈಸೂರ್ ಪಾಕ್, ಲಾಡು, ಹಲ್ವ, ಜಿಲೇಬಿ, ಖಾರಸಾವೆ, ಸೊಹಾನ್ ಪಪ್ಪಡಿ, ಜಹಂಗೀರ್ ಹಿಂಗೆ ಎಂತೆಂತದೋ ತಿಂಡಿಗ ಕಾಂಬೊದು. ಆ ಉದ್ದ ಕಾಲ್‌ದ್ ಸೆಡೆಂದ ಬೂಂದಿನ ಗೋಂಚಿ ಗೋಂಚಿ ತಕ್ಕಡಿಗೆ ಹಾಕುದು, ರಪ ರಪಾಂತ ಪೇಪರ್‌ಗೆ ಹಾಕಿ ನೂಲ್‌ಲಿ ಸುತ್ತಿ ಕೊಡ್ತಿತ್ತ್. ಆ ಸಿಂಹಿ ಗಮಕ್ಕೆ ಜೇನ್ ನಣಗ ಮುತ್ತುತಿದ್ದೊ. ಅಲ್ಲಿ ನಿತ್ತವ್ ಬೇಗ ಮಸುಗುದುಲೆ. ಆ ಕನ್ನಡಿಲಿ ತಮ್ಮನ್ನ ತಾವ್ ನೋಡಿಕಂಡ್ ವ್ಯಾಪಾರ ಮಾಡ್ದರ್ಲಿ ಒಂದು ಕುಸಿನೇ ಬೇರೆ. ಅದ್ ಇರ್‌ಲಿ, ಇಲ್ಲಿ ಮನೆಲಿ ಅಪ್ಪ ತಂದ ಸಂತೆ ಬ್ಯಾಗ್‌ಂದ ಎಲ್ಲಾ ಸಾಮಾನ್‌ನ ತೆಗ್ದ್ ಆಕನ ಆ ಮನೆನೇ ಒಂದ್ ಸಣ್ಣ ಸಂತೆ ಆದಂಗೆ ಆತಿತ್. ಸಂತೆದ್ ವಾಸನೆ ಅಲ್ಲೆಲ್ಲಾ ಹರ್‌ಡಿದಂಗೆ ಆತಿತ್. ಅವ್ವ ಆ ಎಲ್ಲಾ ಸಾಮಾನ್‌ಗಳ್ನ ಡಬ್ಬಿಗೆ ಹಾಕಿ ಜಕ್ಕರೆ ಮಾಡ್ತಿತ್ತ್. ಮಕ್ಕ ಗೋಲಿ ಮಿಠಾಯಿನ ತಿಂದ್‌ಕಂಡ್ ಅಪ್ಪ ಇನ್ಯಾಗ ಸಂತೆಗೆ ಹೋದುತ ಗ್ಯಾನ ಮಾಡಿಕಂಬತಿದ್ದೊ. ಅಷ್ಟೊತ್ತಿಗೆ "ಅಲ್ಲಾ, ಬೆಲ್ಲ ತಾತ್‌ಲೆನಾ"ಂತ ಅವ್ವ ಕೇಳ್ದೆ. ತಂದೊಳೆ, "ಸರಿಯಾಗಿ ನೋಡು"ತ ಅವ್ವಂಗೆ ಹೇಳ್ತ್. ಇಲ್ಲೆ, ನೀವ್ ಬೆಲ್ಲ ತಾತೇಲೆತ ಅವ್ವನ ವಾದ. ಅರ್ಧ ಕಿಲೋ ಬೆಲ್ಲ ತೂಕ ಮಾಡ್ಸಿಯೊಳೆಯ. ಅಂವ ಕಾಗದಲಿ ಸುತ್ತಿ ಆಲ್‌ಗೆಂಡೆ ರಾಶಿ ಮೇಲೆ ಇಸಿತ್. ನಾ ದುಡ್ಡು ಕೊಟ್ಟೊಳೆ. ಅಷ್ಟ್ ಲಾಯ್ಕ ಗ್ಯಾನ ಉಟ್ಟುತ ಅಪ್ಪ ಹೇಳ್ತ್. ಹೌದು, ದುಡ್ಡು ಕೊಟ್ಟಿರುವರಿ. ಆದರೆ ಬೆಲ್ಲ ಇಲ್ಲೆಲ. ಛೇ, ಬಸ್ಸ್‌ಲಿ ಯಾರ್‍ಯಾರ್ ಬ್ಯಾಗ್‌ಂದ ತೆಗ್ದ್ ಬುಟ್ಟೊನಾ? ಇಲ್ಲರೆ ಬ್ಯಾಗ್‌ಂದ ಬಿದ್ದ್‌ಗಿದ್ದ್ ಹೋತಾ? ಅಪ್ಪನ ಪರದಾಟ ಸುರಾತ್. ಆಗ ಅವ್ವ ಹೇಳ್ತ್: ನೀವ್ ದುಡ್ಡ್ ಕೊಟ್ಟಿರುವರಿ, ಆದರೆ ಬೆಲ್ಲನ ಅಲ್ಲೇ ಬುಟ್ಟೊಳರಿ. ಹೌದಲ್ಲ, ಎಷ್ಟೋ ಸತಿ ದುಡ್ಡು ಕೊಡ್ದರ್‌ಲಿ ನಾವ್ ನಿಸೂರರ್, ಆದರೆ ಸಾಮಾನ್ ತಕಣದೆ ಹಂಗೇ ಬಂದವೆ. ಚಿಲ್ಲರೆ ತಕಣದೆ ಬಾದು, ಇಡೀ ಬ್ಯಾಗ್‌ನೇ ಬುಟ್ಟು ಬಾದು, ಕೊಡೆನ ನೆಟ್ಟ್ ಬಾದು, ಜೋಬುಂದ ದುಡ್ಡ್‌ನ ಕಳ್ಕಂಡ್ ಬಾದು, ಇದೆಲ್ಲಾ ಜೀವನಲಿ ಆಬುಟದೆ.

* * * * *

# ಹಾವುಗ ತೆಕ್ಕೆ ಹಾಕಂಬದರ ನೋಡಿಕಾಗದ್ ಗಡ!

ಮಕ್ಕ ಕಾಡ್ ದಾರಿಗಾಗಿಯೇ ನಡ್ಕಂಡ್ ಇಸ್ಕೂಲ್‌ಗೆ ಹೋತಿದ್ದೊ. ವಾಹನ ಹತ್ತುವ ಮಾತೇ ಇಲ್ಲೆ. ಆ ಕಾಡ್ ದಾರಿನೇ ಪ್ರಕೃತಿ ಪಾಠ ಹೇಳ್ತಿತ್ತ್. ದಾರಿಲಿ ಥರಾವರಿ ಕಾಡ್, ಬೇರೆ ಬೇರೆ ಥರದ ದೊಡ್ಡ ದೊಡ್ಡ ಮರಗ, ಬೇರೆ ಬೇರೆ ಥರದ ಕಾಡ್ ಹಣ್ಣ್‌ಗ, ಕೊಕ್ಕಾರ್ಚಿ, ಚೂರಿ, ಕಾರೆ, ನಾಚಿಕೆ, ಕೊಳ, ಚುಂಡೆ, ಬೆದ್‌ರ್ ಮುಳ್ಳುಗ. ಕೆರೆ, ತೋಡು, ಹೊಳೆ, ಗದ್ದೆ, ಕಿತ್ತುಳಿ ತೋಟಗ, ಕಾಫಿ ತೋಟಗ, ಒಂದೆರ್‌ಡ್ ಅಂಗ್ಡಿ ಮತ್ತೆ ಸಣ್ಣ ಸಣ್ಣ ಹೊಟೇಲ್‌ಗ, ಇಸ್ಕೂಲ್ ದಾರಿಲಿ ಸಿಕ್ಕ್‌ತಿದ್ದೊ. ಕಾಡಾನೆಗ, ಕಾಡ್ ಹಂದಿಗ, ಕಡವೆ, ಸಾರ್‌ಗ, ಕುರೇಂಗಿ, ಹುಲಿ, ಕಪಿಗ, ಮುಚ್ಚಗ, ಕಾಡುಕೋಳಿಗ, ಥರಾವರಿ ಹಕ್ಕಿಗ, ಬೆಂಞಣ ಗೂಡು, ಹುಲಿ ಕಡಂದಿ ಗೂಡು, ಕೋಲ್ಜೇನ್, ಹೆಜ್ಜೇನ್, ಹುತ್ತದ ಜೇನ್ ಇದೆಲ್ಲಾ ದಾರಿಲಿ ಯಾಗಾರ್ ಒಮ್ಮೊಮ್ಮೆ ಕಾಂಬತ್ತಿತ್ತ್. ದನಗ ಏನಾರ್ ಸತ್ತ್ ಬಿದ್ದಿದ್ದರೆ ಅದರ್‍ನ ತಿಂಬಕೆ ಬಾತಿದ್ದ ರಣ ಹದ್ದ್‌ಗ ಕಾಂಬಕ್ಕೆ ಸಿಕ್ಕ್‌ತಿದ್ದೊ. ಆ ರಣ ಹದ್ದ್‌ಗ ಜಡ್ಡ್ ತಿಂಬಕೆ ಬಾಕನ ಅಷ್ಟ್ ದೂರಂದ ಹಾರಿಕಂಡ್ ಬಂದ್ ಬಂದಂಗೆ ಕೂರ್‌ತಿತ್ತ್‌ಲೆ. ಹಾರಿಕಂಡ್ ಸುತ್ತಿ ಸುತ್ತಿ ನಿಧಾನಾಗಿ ಬಯ್‌ಲ್‌ಲಿ ಇಳ್ದ್ ಅಷ್ಟ್ ದೂರ ಓಡಿಕಂಡ್ ಹೋಗಿ ನಿಲ್ಲ್‌ತಿದ್ದೊ. ಇಮಾನನೂ ಹಂಗೆ ಸುತ್ತು ಹಾಕಿ, ನಿಲ್ದಾಣಲಿ ಭೂಮಿನ ಮುಟ್ಟಿದಂಗೆ ಅಷ್ಟ್ ದೂರ ಓಡಿ ಮತ್ತೆ ನಿಲ್ಲುದು ತಾನೆ? ಹಾರಕನೂ ಸನ ಹದ್ದ್‌ಗ ಅಷ್ಟ್ ದೂರ ಓಡಿ ಮತ್ತೆ ಹಾರ್ದು. ಇಮಾನನೂ ಹಂಗೆ ಓಡಿ ಮತ್ತೆ ಹಾರ್ದು. ಮಕ್ಕಳಿಗೆ ಇದೆಲ್ಲಾ ಪ್ರಕೃತಿ ಪಾಠ ಅಲ್ಲದೆ ಮತ್ತೆಂತಾ?

ಥರಾವರಿ ಮರಂತ ಹೇಳ್ದೆ ನೋಡಿ. ಅವ್‌ಗಳ್‌ಲಿ ಮುಖ್ಯವಾಗಿ ಮತ್ತಿ, ಬೇಂಗೆ (ಬೇಂಗೆಂತೇಳ್ರೆ ಹೊನ್ನೆ) ತಡ್‌ಸಿಲ್, ಚಾಕಟೆ, ನವ್‌ಲಾಡಿ, ಅರಶಿನ

ತೇಗ, ತೇಗ, ಜಗಳಗಂಟಿ, ಬೆಳ್ಳಂದಿ (ಬೆಳ್ಳಂದಿಂತೇಳ್ರೆ ನಂದಿ) ಬೆಂಡೆ, ದಿಂಡ್‌ಗ, ಬೀಟಿ, ಕಡಮ ಚಕ್ಕೆ, ಅಂಬಟೆ, ಕುಂಬುಳಿ, ಬೂರುಗ, ಕಾವಟೆ, ನೆಲ್ಲಿ ಕಾರೆ, ಚಾಂದಿ, ಹೆಬ್ಬಲ್ಸ್, ಕಾಡ್ ಹಲ್ಸ್, ಕಾಡ್ ಮಾವು, ಗೋಳಿ, ಗೋಂದು, ನೊಜಲೆ, ಅಶ್ವತ್ಥ, ಶ್ರೀಗಂಧ ಹಿಂಗೆ ಆ ಮರಗಳ್ನ ಗುರುತು ಮಾಡುವಷ್ಟ್ ತಿಳಿವಳಿಕೆ ಮಕ್ಕಳಿಗೆ ಇರ್ತಿತ್.

ಬೇಸಗೆ ಕಾಲಲಿ ಒಮ್ಮೊಮ್ಮೆ ಸುಂಟ್ರ ಗಾಳಿ ಬೀಸಕನಂತೂ ನೋಡಿಕೆ ಪೊರ್ಲು. ಆದರೆ ಅದ್ಕೆ ಸಿಕ್ಕಿಕಂಡರೆ ಮುಕ್ತ್ ಕತೆಂತೇಳುವಷ್ಟು ಹೆದ್ರಿಕೆ ಆತಿತ್. ಕಾಡ್ಗಿಚ್ಚ್ ಹೊತ್ತಕನಂತೂ ಸುಂಟರ ಗಾಳಿ ಬಂದರೆ ಕಿಚ್ಚ್ ಮರದ ತುದಿ ಮುಟ್ಟಿ ಮುಟ್ಟ್‌ತಿತ್. ಕುಂಬು ಮರಕ್ಕೆನಾರ್ ಕಿಚ್ಚ್ ಹಿಡ್ದರೆ ಮಹಾ ಅಪಾಯ. ಗಾಂಧಿ ಗುಲಾಬಿ ಕಾಡ್ ಇಲ್ಲರೆ ಬೆದ್ರ್ ಹಿಂಡ್ಲ್ ಹೊತ್ತ್‌ತಿದ್ದ ರೀತಿನ ಗ್ಯಾನ ಮಾತ್ರೆ ಎದೆ ಈಗಳು ಡವಗುಟ್ಟಿದೆ. ನೂರಾರ್ ಎಕರೆ ಕಾಡ್ ಕಿಚ್ಚ್‌ನ ಬಾಯಿಗೆ ಸಿಕ್ಕಿ ಧ್ವಂಸ ಆತಿತ್. ಕರಿ ನೆಲ, ಬೂದಿ ರಾಶಿಯಾಗಿ ಮಳೆ ಬೀಳೊ ಮುಟ್ಟ ಬರಡಾಗಿರ್‌ತಿತ್. ಯಾಗ ಮಳೆ ಬೀತೋ ತಕ್ಕಣೀ ಸುತ್ತಮುತ್ತ ಮರ ಗಿಡ ಚಿಗ್‌ರಿ ಭಾರೀ ಪೊರ್ಲು ಕಾಂಬೊದು. ಆದರೆ ಆ ಕಾಡ್ಗಿಚ್ಚಿಗೆ ಸಿಕ್ಕಿ ಭಸ್ಮ ಆದ ಮನೆ, ಆ ಸಂಸಾರ ಕಡೆಗೆ ದಿಕ್ಕಾಪಾಲಾದ ಘಟನೆ ಮಾತ್ರ ಮರೆಕಾದುಲೆ.

ಬೇಸಗೆಲಿ ಗದ್ದೆ ಬಯಲ್‌ಲಿ ಹಾವುಗ ತೆಕ್ಕೆ ಹಾಕಂಬದು, (ಹೆಣೆ ಆಡುದು) ಅದರ ನಿತ್ತ್ ನೋಡ್ದು ಮಕ್ಕಳಿಗೆ ಒಂದ್ ರೀತಿ ಮಜಾ ಕೊಡ್ತಿತ್. ಆದರೆ ಆ ವಿಚಾರನ ಮನೆಲಿ ಹೇಳ್ರೆ ಸಮಾ ಬಯ್ಗಳನೂ ಬೀತಿತ್. ಯಾಕೆಂತೇಳ್ರೆ ಹಾವುಗ ಹಂಗೆ ತೆಕ್ಕೆ ಹಾಕಂಬದರ ನೋಡಿಕಾಗದ್ ಗಡ. ಹಂಗೆ ನಾವ್ ನೋಡ್ದರ ಹಾವು ಮನಿ ನೋಡಿರೆ ಅದ್ ಸರ್‌ತ ಬಂದ್ ದಾಳಿ ಮಾಡ್ದೆಗಡ. ಆ ಸಮೆಲಿ ಅವುಕೆ ಭಾರೀ ಸಿಟ್ಟ್‌ಗಡ. ಹಂಗೆ ತೆಕ್ಕೆ ಹಾಕಂಬ ಹಾವುಗಳ್‌ಲಿ ಒಂದ್ ಕೇರೆ ಹಾವು ಮತ್ತೊಂದ್ ನಾಗರ ಹಾವುಗಡ. ಕೇರೆ ಹಾವು ಮತ್ತೆ ನಾಗರ ಹಾವು ತೆಕ್ಕೆ ಹಾಕಂಡವೆತ್ತೇಳುವ ವೈಜ್ಞಾನಿಕ ಸತ್ಯ ಅಂತು ಗೊತ್ಲೆ. ಆ ವಿಚಾರ್‌ನ ಉರಗ ತಜ್ಞರ್‌ನೇ ಕೇಳೊಕು ಅಷ್ಟೆ.

ರೈತನ ಸಿನೇತ ಎರೆಹುಳ. ಕೆಲವ್ ಸತಿ ಭೂಮಿ ಆಳಲಿ ಶಾಖ ಜಾಸ್ತಿ ಆಕನ ಎರೆ ಹುಳಗ ಹೊರಗೆ ಬಂದವೆ. ಹಂಗೆ ಹೊರಗೆ ಬಂದ ಎರೆ ಹುಳಗ

ಭೂಮಿ ಒಳಗೆ ಹೋಕೆ ಆಗದೆ ನೆಲದ ಮೇಲೆ ಒದ್ದಾಡಿವೆ. ಹಂಗೆ ಒಮ್ಮೊಮ್ಮೆ ಲೆಕ್ಕ ಇಲ್ಲದಷ್ಟು ಎರೆ ಹುಳಗ ಒಡ್ದಾಡಿ ಸತ್ತವೆ. ಹಂಗೆ ಭೂಮಿ ಹೊರಗೆ ಬಂದ ಎರೆಹುಳಗಳ ಪಿಜಿನ್‌ಗ ಮುತ್ತಿಕಂಡ್ ಕಚ್ಚಿ ಎಳ್ದಾಡಿವೆ. ಚರಂಡಿಗಳ್‌ಲಿ ಅಲ್ಲಿ ಇಲ್ಲಿ ಲೆಕ್ಕ ಮಿತಿಯಿಲ್ಲದಷ್ಟು ಎರೆ ಹುಳಗ ಪಿಜಿನ್‌ಗಳಿಗೆ ಹಕ್ಕಿಗಳಿಗೆ, ನಣಗಳಿಗೆ ಹಾರ ಆಗ್ತಿದ್ದರ ಇಸ್ಕೂಲಿಗೆ ಹೋತಿದ್ದ ಹಳ್ಳಿ ಮಕ್ಕ ನೋಡ್ತಿದ್ದೊ.

ಹಿಂದೆ ಏಪ್ರಿಲ್ 10 ಕ್ಕೆ ಇಸ್ಕೂಲಿಗೆ ಬೇಸಿಗೆ ರಜೆ ಸುರಾದರೆ ಮೇ 22 ಕ್ಕೆ ಮತ್ತೆ ಇಸ್ಕೂಲ್ ಸುರಾಗ್ತಿತ್ತ್. ಅದ್ರೊಟ್ಟಿಗೆ ಮುಂಗಾರ್ ಮಳೆನೂ ಹಾಜರ್. ಗುಡುಗು, ಸಿಡ್ಲ್, ಗಾಳಿ ಮಳೆ, ಆಲಿಕಾಯಿ ಏನೋ ಒಂಥರದ ಖುಷಿ, ಅದ್ರೊಟ್ಟಿಗೆ ಹದ್ರಿಕೆ. ಮಳೆ ಬುಟ್ಟಂಗೆ ಬಿಸ್ಲ್. ಕಾಮನ ಬಿಲ್ಲ್, ಕೆಲ ಸತಿ ಬಿಸ್ಲೂನೂ, ಮಳೆನೂ ಇರ್ತಿತ್. ಆಗ ಮಕ್ಕ 'ಹೋ'ಂತೇಳಿಕಂಡ್ ಕೊಣೇತಿದ್ದೊ. ಕುದುಕನ ಮದುವೆಂತೇಳಿ ನಗಾಡ್ತಿದ್ದೊ. ಕಲ್ಕ್ ನೀರ್ ತೋಡ್‌ಲಿ ತುಂಬಿ ಹರೇತಿತ್. ಆಗ ದೊಡ್ಡ ಮಕ್ಕ ತೋಡು ನಡೂಲಿ ನಿತ್ತ್‌ಕಂಡ್ ಸಣ್ಣ ಮಕ್ಕಳ ಕೈ ಹಿಡ್ದ್ ದಾಟ್‌ಸ್ತಿದ್ದೊ. ಕೆಲವ್ ಸತಿ ಎಲ್ಲಾ ಮಕ್ಕ ಕೈ ಕೈ ಹಿಡ್ಕಂಡ್ ಸಾಲಾಗಿ ತೋಡು ದಾಟ್‌ತಿದ್ದೊ. ಜುಲಾಯಿ ತಿಂಗ ಇಪ್ಪತ್ತೆರಡೋ ಇಪ್ಪತ್ಮೂರಕ್ಕೊ ಮಳೆಗಾಲದ ರಜೆ ಸುರಾಗಿ ಆಗಸ್ಟ್ ತಿಂಗಳ ಸುರುನ ವಾರಲಿ ಇಸ್ಕೂಲ್ ಸುರಾಗ್ತಿತ್ತ್. ಪುನಾ ಮಳೆ ಜೋರಾದರೆ ಮತ್ತೆ ಸನ ರಜೆ ಕೊಡ್ತಿದ್ದೊ. ಕೆಲವು ಸತಿ ಮಳೆಗಾಲದ ರಜೆಲಿ ಮಳೆನೇ ಇರ್ತಿತ್‌ಲೆ. ದಸರಲಿ ದಸರ ರಜ, ಡಿಸಂಬರ್‌ಲಿ ಕ್ರಿಸ್‌ಮಸ್ ರಜ ಇರ್ತಿತ್. ನಾಟಿ ಕೆಲ್ಸ ಸಮೆಲಿ, ಬೆಳೆ ಕೊಯ್ಲು ಸಮೆಲಿ ಮಕ್ಕಳ್‌ಂದ ಸಹಾಯ ಸಿಕ್ಕ್‌ತಿತ್ತ್.

ಆದರೆ ಮಕ್ಕಳಿಗೆ ಬೇಜಾರಾತಿದ್ದದ್‌ತ್ತೇಳ್ರೆ ವಿಪರೀತ ಹೋಂ ವರ್ಕ್! ಒಂದರ್ನೇ ಐವತ್ತ್ ನೂರು ದಪ ಬರೆಕು. ಹಂಗೆ ಬರ್ದರ 'ಸರಿಯಾಗಿ' ನೋಡ್ರೆ ಬರ್ದದ್ ಪೂರಾ ತಪ್ಪು. ಅಂದರೆ ಅಷ್ಟೂ ಸತಿ ತಪ್ಪುನೇ ಬರ್ದ್ ಕಲ್ತಂಗಾತಲ್ಲ! ನಿಜಕ್ಕೂ ವಿಪರೀತ ಹೋಂ ವರ್ಕ್ ಪಾಠದ ಮೇಲೆ ಬೇಜಾರಾಗುವಂಗೆ ಆದೆ, ಮಕ್ಕಳ ಮನ್ಸ್ ಮೇಲೆ ಕೆಟ್ಟ ಪರಿಣಾಮ ಬೀರ್ದೆತ ಇಸ್ಕೂಲವ್ಕೆ ಯಾಕೆ ಅರ್ಥ ಆದುಲೆ? ಕಷ್ಟಪಟ್ಟ್ ಬರ್ದರ ಇಸ್ಕೂಲವು ಸರಿಯಾಗಿ ನೋಡ್ತಿದ್ದನೊ? ಅದೂ ಇಲ್ಲೆ. ಇಸ್ಕೂಲವು ಮಕ್ಕಳ ಸೈಕಾಲಜಿನ ಸರಿಯಾಗಿ ಅರ್ಥ ಮಾಡಿರ್ದುಲೆತ ಆದೆ.

* * * * *

# ಇಂಕ್ ಪಿಲ್ಸ್

ಬರೆಕೆ ಪೆನ್ನ್ ಸಿಕ್ಕೊಕೊರೆ ನಾಕನೇ ಕ್ಲಾಸ್ ಪಾಸಾಕಾಗಿತ್ತ್. ಅಲ್ಲಿ ಮುಟ್ಟ ಸ್ಲೇಟೇ ಗತಿ. ಸ್ಲೇಟ್‌ಲಿ ಬರೆಕೆ ಸ್ಲೇಟ್ ಕಡ್ಡಿ (ಬಳಪ) ಇರ್ತಿತ್. ಕೆಲವ್ ಕಡ್ಡಿಗಳ್‌ಲಿ ಬರೆಕೇ ಆತಿತ್‌ಲೆ. ಕರ ಕರತೇಳಿ ಸದ್ದಾತಿತ್. ಸ್ಲೇಟ್ ಪೂರಾ ಗೆರೆ ಬೀಳ್‌ತಿತ್ತ್. ಕೆಲವ್ ಕಡ್ಡಿಗ ಬರೆಕೆ ಲಾಯ್ಕ ಆದು. ಅದರ್‍ನ ಬೆಣ್ಣೆ ಕಡ್ಡಿಂತೇಳ್‌ತಿದ್ದೊ. ಕೆಲವ್ ಮಕ್ಕಳಿಗೆ ಕಡ್ಡಿನ ತಿಂಬ ಚಟ ಬೇರೆ. ಹಂಗಾಗಿ ಅಂತ ಮಕ್ಕಳಿಗೆ ದಿನಕ್ಕೆ ಒಂದೆರ್‌ಡ್ ಕಡ್ಡಿ ಬೇಕಾಗ್‌ತಿತ್ತ್. ಸ್ಲೇಟ್ ಏನಾರ್ ಕೈ ತಪ್ಪಿ ಬಿದ್ದರೆ ಒಡ್ದೇ ಹೋತಿತ್. ಸ್ಲೇಟ್‌ಗೆ ಮರದ ಚೌಕಟ್ಟ್ ಇರ್ತಿತ್. ಚೌಕಟ್ಟ್ ಸಡ್ಲ ಆಗಿ ಮೂಲೆ ಮೂಲೆ ಬುಟ್ಟ್ ಹೋಗಿ ಬರೀ ಬೋಳು ಸ್ಲೇಟ್ ಕೈಲಿ ಇದ್ದದೂ ಉಟ್ಟು. ಅಂತದರ್ಲಿ ಕನ್ನಡ ಅಕ್ಷರ ಬಳ್ಳಿ, ಪಾಠ, ಮಗ್ಗಿ, ಲೆಕ್ಕ ಇದರ್ನೆಲ್ಲ ಬರೆಕಾಗಿತ್ತ್. ಬರ್ದರ್ನ ಉಜ್ಜುದು ಹೆಂಗೆ? ಉಗೆದು ಉಜ್ಜುದು ಮಾಡ್ತಿದ್ದೊ. ಗೂಡೆಗ ಲಂಗದ ತುದಿಂದ ಉಜ್ಜಿರೆ ಹೈದಂಗ ಬುಸ್‌ಕೋಟ್‌ದ್ ತುದಿಂದ ಉಜ್ಜಿಕಂಬತಿದ್ದೊ. ಕೆಲವು ಸತಿ ದಾರಿ ಕರೆಲಿ ಸಿಕ್ಕ್‌ತಿದ್ದ ನೀರ್ ಕಡ್ಡಿ ಗಿಡದ ದಂಟ್, ಅದಿಲ್ಲರೆ ಮಂದ ಎಲೆದ್ ಗಿಡದ ಎಲೆ, ಅದಿಲ್ಲರೆ ಸೀತೆ ಹೂವು ಗೆಂಡೆಂದ ಸ್ಲೇಟ್ ಉಜ್ಜುತ್ತಿದ್ದೊ. ಪರೀಕ್ಷೆ ಹಿಂದೆನ ದಿನ ಮಸಿಂದ ಸ್ಲೇಟ್‌ನ ಉಜ್ಜಿ ತೊಳ್ದ್ ಒಣಂಗ್‌ಸಿ ಬ್ಯಾಗ್‌ಗೆ ಹಾಕಿ ಆಣಿಗೆ ಕೋಸಿ ಇಸ್‌ತಿದ್ದೊ.

ನಾಕನೇ ಕ್ಲಾಸ್‌ಂದ ಪಾಸಾಗಿ ಐದನೇ ಕ್ಲಾಸ್‌ಗೆ ಸೇರಕನ ಕೈಗೆ ಪೆನ್ನ್ ಸಿಕ್ಕ್‌ತಿತ್ತ್. ಐದನೇ ಕ್ಲಾಸ್‌ಗೆ ಪ್ರಮೋಷನ್‌ತೇಳ್ರೆ ದೊಡ್ಡ ಕ್ಲಾಸ್ ಮಕ್ಕಂತೇಳ್ವ ಜಂಬ ಬೇರೆ. ಪೆನ್ನ್‌ಲಿ ಬರೆದುಂತೇಳ್ರೆ ಏನೋ ಒಂಥರದ ಕುಸಿ. ಹೈದಂಗ ಪೆನ್ನ್‌ನ ಎದೆ ಜೋಬುಗೆ ಸಿಕ್ಕಿಸಿಕಂಡರೆ ಗೂಡೆಗ ಕಂಪಾಸ್ ಪೆಟ್ಟಿಗೆಲಿ ಇಸಿಕಂಬತಿದ್ದೊ. ಕೆಲವ್ ಸತಿ ಇಸ್ಕೂಲಿಗೆ ಓಡಿಕಂಡ್ ಹೋತಿದ್ದೊ. ಆಗಂತೂ

ಪೆನ್ನ್ ಲೀಕಾಗಿ ಜೋಬು ಪೂರಾ ಇಂಕಾಗಿ ಕರೆ ಆಗ್‌ತಿತ್. ಕೆಲವ್‌ಕಂತೂ ಯಾಗ ನೋಡ್ರೂ ಪೆನ್ನ್ ರಿಪೇರಿದೇ ಕೆಲ್ಸ. ಕ್ಯಾಪ್ ತೆಗೆಯೊದು ಪೆನ್ನದ್ ಕುತ್ತಿಗೆ ತಿರ್ಗುಸುದು, ನಿಬ್ಬು, ಅದರ ನಾಲಿಗೆನೆಲ್ಲಾ ಬಿಚ್ಚಿ ಹಾಕಂಡ್ ಇಂಕ್ ಕೊಟ್ಟನ್ನೆಲ್ಲಾ ತೊಳ್ದ್ ಮತ್ತೆ ಇಂಕ್ ತುಂಬುಸುದು ಮಾಡ್ತಿದ್ದೊ. ಪೆನ್ನ್ ಕೊಟ್ಟಂದ ಸರಿಯಾಗಿ ನೀರ್‌ನ ಸಿಡ್ಕದೆ ಇಂಕ್‌ನ ತುಂಬ್‌ಸಿ ಬರ್ದರೆ ಅಕ್ಷರ ಸರಿಯಾಗಿ ಕಾಂಬತಿತ್ತ್‌ಲೆ. ಇಂಕ್ ಮುಗ್ದರೆ ಕಾಕನ ಅಂಗ್ಡಿಗೆ ಹೋತಿದ್ದೊ. ಒಂದೆರ್ಡ್ ಪೈಸಾ ಕೊಟ್ಟರೆ ಒಂದ್ ಕೊಟ್ಟ ಇಂಕ್ ಸಿಕ್ಕ್‌ತಿತ್ತ್. ಆಗಾಗ ಅಂಗ್ಡಿಗೆ ಹೋಗಿ ಇಂಕ್ ಹಾಕಿಸಿಕಂಬದು ಕಷ್ಟ ಆಕನ ಇಂಕ್‌ದ್ ಪಿಲ್ಸ್ ತಾತಿದ್ದೊ. ಚಪ್ಪಟೆ ಆದ ಇಂಕ್ ಪಿಲ್ಸ್‌ನ ನೀರ್ ಮಾಡಿ ಕೊಟ್ಟಕೆ ತುಂಬಿಸಿಕಂಬತಿದ್ದೊ. ಮತ್ತೆ ಮತ್ತೆ ಅದೂ ನಿತ್ತತ್. ಇಂಕ್ ಕುಪ್ಪಿನೇ ತಕಂಬಂಗಾತ್. ಪರೀಕ್ಷೆ ದಿನ ಸಣ್ಣ ಇಂಕ್ ಕುಪ್ಪಿನ ಇಸ್ಕೂಲ್‌ಗೆ ತಕ್ಕಂಡ್ ಹೋತಿದ್ದೊ. ಮನೆಂದ ಇಸ್ಕೂಲ್ ಮುಟ್ಟ ಇಂಕ್ ಕುಪ್ಪಿ ಕೈಲೇ ಇರ್ತಿತ್. ಬ್ಯಾಗ್ ಮೂಲೆಲಿ ಇಸಿಕಂಡ್ ಮೆಲ್ಲ ನಡ್ದರೂ ಇಂಕ್ ತುಳ್ಕಿ ಚೆಲ್ಲಿ ಬ್ಯಾಗ್‌ದ ಮೂಲೆ, ಪುಸ್ತಕ ಪೂರಾ ಇಂಕ್‌ದ್ ರಂಪ ರಾಮಾಯಣ ಆಗೋತಿತ್. ಹೆಂಗೋ ಇಸ್ಕೂಲ್‌ಗೆ ಎತ್ತಿದ ಮೇಲೆ ಅವವ್ ಉಪಯೋಗ್‌ಸ್ತ್ತಿದ್ದ ಡೆಸ್ಕ್‌ಲಿ ಮಡ್ಗಕಾಗಿತ್ತ್. ಹಳೆ ಕಾಲದ ಇಸ್ಕೂಲ್ ಡೆಸ್ಕ್‌ಗಳ ಮೇಲೆ ಸುರೂಲಿ ನಡೂಲಿ ಮತ್ತೆ ಕರೇಲಿ ಮೂರು ರಿಂಗ್‌ನಂಗೆ ಗುಂಡಿ ಇಂದೂ ಕಾಂಬಕ್. ಆ ಗುಂಡಿಲಿ ಇಂಕ್ ಕುಪ್ಪಿನ ಮಡ್ಕಂಡ್ ಪರೀಕ್ಷೆ ಬರೇತಿದ್ದೊ. ಪೆನ್ನ್‌ಲಿ ಇಂಕ್ ಮನಿ ಕಮ್ಮಿ ಆಗಿಬುಟ್ಟರೆ ಇಂಕ್ ತುಂಬ್‌ಸಿಕಂಡ್ ಬರೆಕಲ್ಲಾ! ಹೆಂಗೇ ಬರ್ದರೂ ಒಂದ್ ಕೊಟ್ಟ ಇಂಕ್ ತೀರುವವರೆಗೇನೂ ಪರೀಕ್ಷೆ ಬರೇತಿತ್ತ್‌ಲೆ. ಆದರೂ ಏನೋ ಒಂದ್ ರೀತಿನ ಹೆದ್ರಿಕೆ. ಎಲ್ಲಾರ್ ಇಂಕ್ ಕಮ್ಮಿ ಮನಿ ಆಗಿ ಹೋದರೆ ಪರೀಕ್ಷೆ ಬರೆದು ಹೆಂಗೆಂತೇಳ್ವ ದೂರಾಲೋಚನೆ. ಕೆಲವ್ ಸತಿ ಬರ್ಕಂಡಿರಕನ ಒಮ್ಮೆಗೆ ಇಂಕ್ ಧುಮುಕಿ ತೊಟ್ಟ್ ತೊಟ್ಟ್ ಬೀಳ್ತಿತ್ತ್. ಆಗ ಕೂಡ್ಲೆ ಹೀರ್‌ಕಾಗದಂದ ಒತ್ತಿ ತೆಗೆತಿದ್ದೊ. ಕೆಲವ್ ಸತಿ ಪೆನ್ನ್ ಏನೇನ್ ಮಾಡಿರೂ ಬರೆಕಾಗದಂಗೆ ಆಗೋತಿತ್. ಆಗ ನಿಬ್ಬು ನಡೂಗೆ ಬ್ಲೇಡ್ ಹಾಕಿ ಸೆರೆ ಮಾಡಕಾಗಿತ್ತ್.

ಮುಂದೆ ಮುಂದೆ ಹೋತಿದ್ದಂಗೆ ರೆಡ್ಡಿಂಕೂ ಬಾತ್. ಪ್ರಶ್ನೆನೆಲ್ಲಾ ರೆಡ್ಡಿಂಕ್‌ಲಿ ಬರೆಕಾಗಿತ್ತ್, ಆ ಪೆನ್ನ್‌ಲಿ ಬರೆಕನೂ ಬೆರ್‌ಳ್‌ಗೆಲ್ಲಾ ಇಂಕ್ ಆತಿತ್. ಆಗ ಅದರ

ತೊಳೆತಿದ್ದದ್ ಕಮ್ಮಿ. ಯಾರಾರ್ ನೋಡಲಿ, ಓಹೋ ಬಾರಿ ಬರ್ದವೆತ ಗೊತ್ತಾಗಲಿತ್ತೇಳುವ ಜಂಬ ಬೇರೆ! ಈ ನಡುಲಿ ಒಳ್ಳ ಮಕ್ಕಳೊಟ್ಟಿಗೆ ಕೆಲವ್ ಕಳ್ಳ ಮಕ್ಕಳೂ ಇದ್ದೊ. ಪುಸ್ತಕ ರಬ್ಬರ್, ಪೆನ್ಸಿಲ್, ಪೆನ್ನ್‌ನೆಲ್ಲಾ ಕದೇತಿದ್ದೊ. ಮಾಸ್ಟಿಗೆ ಪುಕಾರ್ ಕೊಟ್ಟಂಗಲ್ಲ ಬುಟ್ಟಂಗಲ್ಲ. ಪುಕಾರ್ ಕೊಟ್ಟರೆ ಕದ್ದವಂಗೆ ಮಾಸ್ಟ್ರ ಕೈಂದ ಸಮಾ ಬಿದ್ದದೆ. ಮಾಸ್ಟ್ರ ಕೈಂದ ಪೆಟ್ಟ್ ತಿಂದಂವ ಹೆಂಗಾರ್ ಸಮಯ ಕಾದ್ ಪುಕಾರ್ ಕೊಟ್ಟವಂಗೆ ಗುಂಪುಕಟ್ಟಿ ಹೊಡ್ದದೆ. ಹಂಗಾಗಿ ಪುಕಾರ್ ಕೊಡಿಕೇ ಹೋತಿತ್‌ಲೆ. ಹಿಂಗಾಗಿಯೇ ಕೆಲವ್ ಕಳ್ಳತನನ ರೂಢಿ ಮಾಡಿಕಂಡ್ ಕಡೆಗೆ ದೊಡ್ಡ ಕಳ್ಳರಾದವೆತ ಕಂಡದೆ. ಗಿಡಾಗಿ ಬಗ್ಗದೆ ಇರ್ದು ಮರಾಗಿ ಬಗ್ಗುದುಲೆತ ಹಿರಿಯವ್ ಹೇಳ್ದ ಮಾತ್ ಮರ್ರೆಕಾಗದ್.

* * * * *

# ಆಹಾ! ಮೊದುವೆ

ಊರೊಳಗೆ ಒಂದ್ ಮೊದುವೆ ನಿಶ್ವಯ ಮಾಡ್ದು ಅಷ್ಟ್ ಸುಲಭದ ಮಾತಲ್ಲ. ಹಿಂದೆಲ್ಲಾ ಗೂಡೆನ ನೋಡಿಕೆತ ಹೋಗ್‌ವು ನಡ್ದೇ ಹೋಕಾಗಿತ್ತ್. ಆ ದಾರಿಯೋ ಯಾರ್‍ಯಾರ್ದೋ ಮನೆ ಕರೆಗಾಗಿ ಇರ್ತಿತ್ತ್. ಆ ದಾರಿಗಾಗಿ ಯಾರ್ ದಾಟಿರೂ ಆ ಮನೆಯವ್ ನೋಡ್ತಿದ್ದೊ. ಆ ಮನೆಯವ್ ಅಲ್ಲದಿದ್ದರೂ ಇನ್ನೊಂದ್ ಮನೆಯವಾರ್ ನೋಡ್ತಿದ್ದೊ. ಅಂತಾ ಮನೆಗ ಊರ್ದ್ ತನಿಖಾ ಗೇಟ್ ಇದ್ದಂಗೆ. ನಡ್ದ್ ಬರವ್‌ರ್ನ ಕಂಡ್ "ನೀವ್ ಯಾರ್‌ಂತ ಗೊತ್ತಾತ್ಲೆ. ಎಲ್ಲಿಂದ ಬರ್ತಾ ಒಳರಿ? ದೂರ ಹೊರ್ಟದ್"ತ ಕೇಳದೆ ಮುಂದೆ ಕಳ್ಸುವ ಪದ್ಧತಿ ಇತ್ಲೆ. ಇವು "ನಾವು ಹಿಂಗಿಂಗೆ ಇಂಥಾ ಮನೆಗೆ ಹೊರ್ಟದ್‌ತ" ಹೇಳಿಕಂಬತಿದ್ದೊ. ಆಗ ಆ ಮನೆಯವ್ರ ಬಗ್ಗೆ ಇಲ್ಲಾ ಸಲ್ಲದ ಹತ್ತೆಂಟ್ ಸೂನೆ ಹೇಳಿ ಮುಂದೆ ಹೋಕೆ ಬುಡದೆ ಹಿಂದೆಕೆ ಕಳ್ಸಿಬುಡ್ತಿದ್ದೊ. ಈ ಮನೆಯವುಕೆ ಆಟ, ಗೂಡೆ ಮನೆಯವುಕೆ ಸಂಕಟ. ಅಡ್ಗೆ ಮಾಡಿಕಂಡ್ ದಾರಿ ಪಾರಕಾದದೇ ಬಾತ್. 'ತಂದ್' ಮಾಡವುಕೆ ತಲೆಬೆಚ್ಚ. ತಂದ್ ಮಾಡವ್‌ಂತೇಳ್ರೆ ಮೊದುವೆಯ ಮಧ್ಯಸ್ಥಿಕೆ ವಹಿಸವ್‌ತ ಅರ್ಥ. ಹಿಂಗೆ ಚಾಡಿ ಪಿತ್ಲಾಟ ಮಾಡ್ದು ಹಳ್ಳಿಲಿ ಕೆಲವ್‌ಕೆ ಚಟ. ಮೊದುವೆ ತಪ್ಪುಸಿ ಕುಸಿ ಪಟ್ಟವೆ. ಇಲ್ಲಿ ಲಾಭ ನಷ್ಟದ ಪ್ರಶ್ನೆ ಅಲ್ಲ. ಅವುಕೆ ಅದೊಂದ್ ತಮಾಸಿ ಅಷ್ಟೆ. ಅಂತಾ ಕೆಟ್ಟ ಜನಗ ಅವೂ ಉದ್ಧಾರ ಆದುಲೆ ಇನ್ನೊಬ್ಬರ ಉದ್ಧಾರ ಆಕೂ ಬುಡ್ದುಲೆ.

ಹೆಂಗೋ ಮೊದುವೆ ನಿಶ್ಚಯ ಆತ್‌ಂತಾದರೆ, 'ಓ ಅಲ್ಲಿ ಮೊದುವೆ ಎಳ್ಗಿತ್ ಗಡಾ'ಂತ ಕೆಲವ್ ಕುಸಿ ಪಟ್ಟವೆ. ಮತ್ತೆ ಕೆಲವ್ ಕಿಚ್ಚ್ ಪಟ್ಟವೆ. ಯಾವ ಕೆಲ್ಸಕೂ ಆ ಮೊದುವೆನೇ ನೆಪ ಮಾಡಿಕಂಡವೆ. ಬೇಸಗೆಲಿ ಮೊದುವೆ ಎಳ್ಗಿತ್‌ತಾದರೆ "ಮನೆಗೆ ಹುಲ್ಲು ಹೋಸುದು, ಕೊಟಗೆ ರಿಪೇರಿ, ಬೇಲಿ ರಿಪೇರಿ, ಗದ್ದೆದ್ ಪಟ್ಟೆ ಮಣ್ಣ್ ತೆಗೆದು, ತೋಡ್ ರಿಪೇರಿ, ಬಾಮಿ ಸೋಸುದು ಈ ಎಲ್ಲಾ ಕೆಲ್ಸ ಬೇರೆ

ಆತ್‌ಲೆ. ಎಂತ ಮಾಡ್ದುತ ಗೊತ್ತಾಗ್ತಾ ಇಲ್ಲೆ. ಮೊದುವೆ ಕಳ್ಕಂಡೇ ಮಾಡ್ದು ಒಳ್ಳೆದ್ ಕಂಡದೆ"ಂತ ಕೆಲ ಖಾಸಾ ಸಂಬಂಧದವು ಮಾತಾಡಿಕಂಬತಿದ್ದೊ. ಚೌಂಡಿಗೆ ಕೊಡುವಲ್ಲಿ ಗುಳಿಗಂಗೆ ಕೊಡುವಲ್ಲಿ, ಸಂತೆ ದಾರಿಲಿ ಮೊದುವೆದೇ ಮಾತ್. ಮದುವೆ ಕಾರ್ಯ ಮಾಡ್‌ವ ಮನೆಯವುಕಂತೂ ಪುರುಸೊತ್ತೇ ಇಲ್ಲೆ. ಮನೆ ರಿಪೇರಿ ಮಾಡ್ದು, ಹೊಸಾರೆ ಇಳ್ಸುದು, ಅಟ್ಟ ಅಡಿ ಗುಡ್ಸುದು, ತಿಂಟೆ ಸಾರ್ಸುದು, ನೆಲಕ್ಕೆ ಕೈ ಮಣ್ಣ್ ಕೊಡ್ದು, ಕರಿ ಸಾರ್ಸುದು, ಕಲ್ಲ್‌ಂದ ನೆಲ ಅರ್ದ್ ನುಣ್ಣಂಗೆ ಮಾಡ್ದು, ಗೋಡೆಗೆ ಸುಣ್ಣ ಬಣ್ಣ ಹೊಡೆದು, ಕೊಟಗೆ ಗುಂಡಿ ಮುಚ್ಚುದು, ಸೌದೆ ಕೆಲ್ಸ, ಬಟ್ಟೆ ಹೊಲ್ಸುದು, ಚಿನ್ನ ಬಣ್ಣ ವ್ಯಾಪಾರಕ್ಕೆ ಹೋದು, ಕಂಚಿ ಮುಟ್ಟು ತಾದು, ಮಾಸಕ್ಕೆ ಮಾಸ ಕೊಟ್ಟನೆಂತ ಒಪ್ಪಂದ ಮಾಡಿಕಂಡವ್ರಲ್ಲಿಗೆ ಹೋಗಿ ಮಾತಾಡ್ದು, ಮಾಸ ಅಚ್ಚ್‌ಕಟ್ಟ್ ಮಾಡವುಕೆ ಹೇಳ್ದು, ಮಡಿವಾಳಂಗೆ ಹೇಳ್ದು, ವಾದ್ಯದವರ ಕಂಡ್ ಬಾದು, ಕಾಗದ ಕೊಡಿಕೆ ಹೋದು, ವೀಳ್ಯ ಕೊಡ್ದು, ಕಾಸ್ತಾಳಿ ಇರೊರತ್ರ ಹೋಗಿ ಕೇಳ್ದು, ಅಡ್ಗೆವ್ರ ಹತ್ರ ಹೋಗಿ ಸಾಮಾನ್‌ಪಟ್ಟಿ ಕೇಳ್ದು, ಸಂತೆಗೆ ಹೋದು, ಬತ್ತ ಕುಟ್ಟುದು, ಅಕ್ಕಿ ಸೋಸುದು, ಕಾಫಿ ಕುಟ್ಟುದು, ಬೇಳೆ ಹೊರ್ದ್ ಕುಟ್ಟಿ ಹೊಡಿಮಾಡಿ ಡಬ್ಬಿಗೆ ತುಂಬ್ಸುದು, ಹೊಲೆಕೆ ಕೊಟ್ಟ ಬಟ್ಟೆ ಪೂರ್ತಿ ಸಿಕ್ಕಿರ್ದುಲೆ, ಹೊಲ್ಸಿದ ಬಟ್ಟೆ ಕೆಲವ್ ಸಡ್ಲ, ಕೆಲವ್ ಬಟ್ಟೆ ಹಾಕಿಕೇ ಆದ್ಲೆ, ಪುನಾ ಟೈಲರ್ ಹತ್ರ ಓಡ್ದು ಹಿಂಗೆ ಕೆಲ್ಸ ಒಂದೆರ್ಡಲ್ಲ. ದಿನ ಬೆಳಗಾದು ಗೊತ್ತೇ ಆಗದಂಗೆ ಆಗ್ತ ಇದ್ದದೆ. ಹಿಂಗಿರಕನ ನೆರೆ ಕರೆಯವ್ ಮನೆಗೆ ಬಂದ್ ಅದ್ ಮಾಡ್ದರಿಯಾ, ಇದ್ ಮಾಡ್ದರಿಯಾ, ಬಳೆಗಾರ ಬಂದಿತ್ತಾ? ಅದ್ ತನ್ನಿ, ಇದ್ ತನ್ನಿ. ಬಂದವ್ ಎಂತಾರ್ ಹೇಳ್‌ವೋ, ನೋಡ್ದವ್ ಏನಾರ್ ಹೇಳುವೋಂತ ಹೇಳಿ ತಮ್ಮ ಕಾಳಜಿನ ತೋರ್‌ಸಿವೆ. ಹಂಗೆ ಹೇಳ್ದರ್ಲಿ ಒಂದ್ ರೀತಿಯ ಪ್ರೀತಿ ತುಂಬಿರ್ತಿತ್ತ್. ಎಂತಾರ್ ಬೇಕಾರೆ ಹೇಳಿಯಪ್ಪಾ. ನಮ್ಮ ಮನೆಂದ ತಂದವೆ. ಎಂತಾರ್ ಮಾಡೊಕುಂತಾದರೆ ಹೇಳಿ ನಾವ್ ಮಾಡಿವೆಂತ ಹೇಳಿ ಸಹಾಯ ಮಾಡ್ತಿದ್ದೊ.

ಆಗೆಲ್ಲಾ ಎಷ್ಟೇ ಕಷ್ಟಾದರೂ ಮನೆಲೇ ಮೊದುವೆ ಮಾಡ್ತಾ ಇದ್ದದ್. ಹಂಗಾಗಿ ಮೊದುವೆ ಮನೆಗೆ ಬೇಕಾದ ಸಂತೆ ಸಾಮಾನ್ ಬುಟ್ಟ್ ಬಾಕಿಯೆಲ್ಲಾ ಊರವೇ ವ್ಯವಸ್ಥೆ ಮಾಡ್ತಿದ್ದೊ. ಹಂಗಾಗಿ ಮೊದುವೆಗೆ ನಾಕ್ ದಿನ ಉಟ್ಟುಂತೇಳಕನ ಆ ಮನೆಯವ್ ಈ ಮನೆಯವ್ ಅವ್ರವ್ರ ಮನೆಂದ ಬೆಂಚಿ, ಕುರ್ಚಿನ ತಂದ್ ಕೊಡ್ತಿದ್ದೊ. ಮಸಿಂದ ಇಲ್ಲರೆ ಸುಣ್ಣಂದ ಅವರವರ ವಸ್ತುಗಳಿಗೆ ಹೆಸ್ರ್ ಬರೆತಿದ್ದೊ.

ಕಡಾಯ, ಗುತ್ತಿಗಂಜಿ, ಕಾವುಂಗ, ಸೆಡೆ, ಸಣ್ಣ ಸಣ್ಣ ಗಂಜಿ ಪಾತ್ರಗ, ಗೈಪು ಮೊಗ್‌ಚಿಕೆ ಕೈ, ಹೆರೆಮಣೆ, ಕಾಫಿ ಹೊಯ್ಯಕೆ ಜಗ್ಗ್, ಮಗ್ಗ್, ಕುಪ್ಪಿ ಗಲಾಸ್, ಚಾಪೆ, ಕುಕ್ಕೆ ಹಿಂಗೆ ಬೇರೆ ಬೇರೆ ಸಾಮಾನ್‌ಗಳ್ನ ಊರವ್ ಕೊಡ್ತಿದ್ದೊ. ಆಗೆಲ್ಲಾ ಸ್ಟೀಲ್ ಪಾತ್ರಗಳ ಮಾತೇ ಇಲ್ಲೆ. ಏನಿದ್ದರೂ ಅಲ್ಯುಮಿನಿಯಂದೇ ಕಾರ್‌ಬಾರ್. ಕಂಚ್, ತಾಮ್ರ, ಹಿತ್ತಾಳೆ, ಪಿಂಗಾಣಿ, ಮಣ್ಣ್‌ದ್ ಮಡ್ಕೆ, ಮಣ್ಣ್‌ದ್ ಚೆಟ್ಟಿಗಳೇ ಇದ್ದದ್.

ಮೊದುವೆ ಕಾರ್‌ಬಾರ್‌ಗೆ ಇನ್ನೇನ್ ಎಂಟತ್ತ್ ದಿನನೇ ಬಾಕಿ ಒಳದ್‌ತಾಕನ ಮನೆಯವ್ರ ಸಿಡ್‌ಕಾಟ, ದುಡ್‌ಕಾಟ, ಕೊಡ್ಕಾಟ ಸುರಾಬುಟ್ಟದೆ. ಏನೋ ಒಂಥರದ ಸಂಕಟ ಮರ್‌ಕಟ. ತೆಂಗ್‌ನಕಾಯಿ ಚೊಪ್ಪು ಬುಡ್ಸೊಕು, ಅಡ್ಕೆ ಹೋಳಾತ್‌ಲೆ, ಸಿಂಹಿ ಅಡ್ಕೆ ತಾತ್‌ಲೆ, ವೀಳ್ಯದೆಲೆ ಆಕು, ಚುಟ್ಟಾ, ಬೀಡಿ, ಸಿಗ್‌ರೇಟ್, ಹೊಸೊಪ್ಪು, ಬೆಂಕಿಪಟ್ನ ತಾಕು, ಬಾಳೆಗೊನೆ ರಂಗ್ ಬಾತ್‌ಲೆ. ಗೊನೆಗೆ ಸುಣ್ಣದ ನೀರ್ ಸಿಡ್ಕಕಾಗಿತ್ತ್. ಇಲ್ಲರೆ ಬಾಳೆಹಣ್ಣ್ ಸೊಪ್ಪುನಾರ್ ಸುತ್ತಕಾಗಿತ್ತ್. ನಾ ಹೇಳ್ದೆ ಹಂಞ ಮುಂದೆ ಗೊನೆ ಕಡೆಕಾಗಿತ್ತ್. ನೀ ಕೇಳ್ತ್‌ಲೆ. ಎಲ್ಲಾ ನಿಂದೇ ಆಗೋತುತೇಳ್ವ ಪರ ಪರ ಪಿರಿ ಪಿರಿ ಮಾತ್‌ನ ಕೇಳಿ "ನೀವ್ ಒಮ್ಮೆ ಸುಮ್ಮನಿರಿ. ನಿಮ್ಮದ್ ಯಾಗೋಳು ಹಿಂಗೆ ಎಲ್ಲ ಸರಿಯಾದೆ"ತ ಹೆಣ್ಣ್ ದುಂಡುನ ಉದ್ದ ಮಾಡ್ದೆ. ಅಷ್ಟೊತ್ತಿಗೆ ಒಂದಿಬ್ಬರು ರಕ್ಕಸ ಪಟ್ಟೆ ತಂದವೆ. ರಕ್ಕಸ ಪಟ್ಟೆತ್ತೇಳ್ರೆ ಬೂತಾಳೆ ಪಟ್ಟೆತ ಅರ್ಥ. ಅದ್ ಗುಡ್ಡ ಕಟ್ಟಿಕೆ ಇರ್ದು. ಗುಡ್ಡಕ್ಕೆ ಮರೆ ಮಾಡಿಕೆ ಅದ್ ಒಳ್ಳೆದಾತಿತ್. ದಳಿ ಕಟ್ಟಿದಂಗೆ ಕಟ್ಟಿ ರಕ್ಕಸ ಪಟ್ಟೆನ ಚುರ್ದ್ ಮರೆ ಕಟ್ಟ್‌ತಿದ್ದೊ.

ಹಿಂಗಿರಕನ ನೆರೆಕರೆವ್, ಊರವ್ ಚಪ್ಪರ ಹಾಕಿಕೆ ಬಂದವೆ. ಕೆಲವ್ ಕಂಬ ಬಡಿಗೆ ಕಡೆಕೆ ಹೋದವೆ. ಮರ ಹತ್ತುವ ಸೂರ ಸೊಪ್ಪು ಕಡೆಕೆ ಹಲ್ಸ್‌ನ ಮರ ಹತ್ತಿದೆ. ಕಂಬ ಕಾಲ್ ಸೊಪ್ಪುನೆಲ್ಲಾ ಹೊತ್ತ್‌ಕಂಡ್ ಎಳ್ಕಂಡ್ ಬಂದವೆ. ಅಂಗಳಲಿ ಹನ್ನೆರ್ಡ್ ಕಂಬದ ಚಪ್ಪರ ಹಾಕಿವೆ. ಕತ್ತಲೆ ಕತ್ತಲೆ ಆಕನ ಬೇಟೆಗೆ ಹೋಗವ್ ಕೋವಿ ಕೇಳಿಕೆ ಬಂದವೆ. ಊರೊಳಗೆ ಮೊದುವೆ ಉಟ್ಟುತಾದರೆ ಊಟಕೆ ಒಂದ್ ಬಗೆ ಕಾಡ್ ಮಾಸದ ಗೈಪು ಇದ್ದೇ ಇರ್ತಿತ್ತ್. ಆಗೆಲ್ಲಾ ಈಗನಂಗೆ ಬೇಟೆಗೆ ಕಟ್ಟ್‌ನಿಟ್ಟ್ ಇತ್ಲೆ. ಹಗ್ಲೇ ರಾಜಾರೋಷಾಗಿ ಕೂಡು ಬೇಟೆ ಸನ ಆಡ್ತಿದ್ದೊ. ರಾತ್ರೆ ಹೆಡ್‌ಲೈಟ್ ಕಟ್ಟಿಕಂಡ್ ಸುತ್ತ್‌ತಿದ್ದೊ. ಅದಿಲ್ಲರೆ ಒಳಿ ಕುದ್ದ್ ಬೇಟೆ ಆಡ್ತಿದ್ದೊ. ಕುರೇಂಗಿ, ಸಾರ್‌ಗ, ಕಡವೆ, ಕಾಡ್ ಹಂದಿ ಹಿಂಗೆ ಎಂತಾರ್ ಒಂದ್ ಸಿಕ್ಕ್‌ತಿತ್ತ್. ಹಿಂಗೆ ಹೊಡ್ದದ್ ಏನಾರ್ ಗೊತ್ತಾಗಿ ಯಾರಾರ್

ಜಬರ್‌ದಸ್ತ್ ಮಾಡಿಕೆ ಬಂದರೆ ಅವುಕೆ ಕೊಡಕಾದ ಪಾಲ್ ಕೊಡ್ತಿದ್ದೊ.

ಕಡವೆ ಹೊಡ್ದರೆ ಒಂದ್ ತೊಡೆ, ಅದಿಲ್ಲರೆ ಬೀವ್ ಮಾಸ, ಹಂದಿ ಹೊಡ್ದರೆ ಪಡನೆಟ್ಟಿ ಮತ್ತೊಂದ್ ಪಾಲ್ ಮಾಸ ಹಿಂಗೆ ಕೊಡ್ತಿದ್ದೊ. ಪಾಲ್ ಯಾಗ ಸಿಕ್ಕಿತೊ ಜಾತಿ ಬಿದ್ದರೆ ನೋಡಿಯೂ, ನೋಡದಂಗೆ, ಗುಂಡ್ ಹೊಡ್ದರೆ ಕೇಳಿಯೂ ಕೇಳದಂಗೆ ಸುಮ್ಮನಾಗ್ತ್ತಿದ್ದೊ. ಅದೇನೇ ಇರ್ಲಿ ಅದೆಲ್ಲಾ ಪಂಡ್ ಕಾಲದ ಮಾತ್. ಅಂತೂ ಹತ್ತೈವತ್ ಅರ್‌ವತ್ ವರ್ಷಗಳ ಹಿಂದೆ ಮೊದುವೆ ಮನೆಲಿ ಕಾಡ್ ಮಾಸದ ಊಟ ಮಾಡ್ದವ್ ಅದರ ಗ್ಯಾನ ಮಾಡಿಕಂಡ್ ನಗಾಡ್‌ವೊ. ಇದೆಲ್ಲಾ ಹೌದಾಂತ ನಿಮ್ಮ ಚಾಂಪನ ಇಲ್ಲೆ ಚಾಮೆವ್ವನ ಒಮ್ಮೆ ಕೇಳಿ ನೋಡಿ.

ಆಗೆಲ್ಲಾ ಊಟಕ್ಕೆ ಬಾಳೆಲೆನೇ ಇರ್ತಿದ್ದದ್. ಹಂಗಾಗಿ ನೆರೆ ಕರೆಯವ್ ಊರವ್ ಅವರವರ ಮನೆಂದ ಐವತ್ತ್-ನೂರ್ ತುಂಡು ಬಾಳೆಲೆ ತಂದ್ ಕೊಡ್ತಿದ್ದೊ. ಬಾಳೆಲೆ ಕಮ್ಮಿ ಆತೋ ಕಾಡಿಗೆ ಹೋಗಿ ಕಾಡ್ ಬಾಳೆಲೆ, ಅದಿಲ್ಲರೆ ಕಲ್ಲ್ ಬಾಳೆಲೆ ಕಡ್ಕಂಡ್ ಬಾತಿದ್ದೊ. ಬಾಳೆಲೆ ಹರಿಯದೆ ಇರಲಿಂತ ಕೊದಿವ ನೀರಿಗೆ ಹಾಕಿ ಬಾಡ್ಸಿ ಇಸ್‌ತಿದ್ದೊ. ಎಲ್ಲವೂ ಅಲ್ಲದಿದ್ದರೂ ಕೆಲವ್ ಹಿಂಗೆ ಮಾಡ್ತಿದ್ದೊ.

ಆಗೆಲ್ಲಾ ದೀಪದ ವ್ಯವಸ್ಥೆ ಇದ್ದದ್ ಕಮ್ಮಿ. ಗ್ಯಾಸ್ ಲೈಟ್‌ನ ಬಾಡಿಗೆಗೆ ತಾತಿದ್ದೊ. ಮನೆ ಒಳಗೆ ಒಂದ್ ಲೈಟ್, ಹೊರಗೆ ಚಪ್ಪರದ ಕೆಳಗೆ ಮತ್ತೊಂದ್ ಇರ್ತಿತ್. ಆ ಲೈಟ್‌ದ್ ಉಸ್ತುವಾರಿ ಒಬ್ಬಂಗೆ ವಹಿಸಿ ಕೊಡ್ತಿದ್ದೊ. ಅದ್ಕೆ ಎಣ್ಣೆ ಕಮ್ಮಿ ಆದರೆ, ಅದ್ ಮಂಕ್ ಆಗಿ ಹೊತ್ತ್ತ್ತಿದ್ದರೆ ಗ್ಯಾಸ್ ಹಾಕುದು ಅವನೇ ಮಾಡ್ತಿತ್ತ್. ಗ್ಯಾಸ್ ಹಾಕುದುಂತೇಳಿರೆ ಪಂಪ್ ಮಾಡ್ದು. ಸುರೂಗೆ ಗ್ಯಾಸ್ ಲೈಟ್ ಹೋಸಕನ 'ಉಸ್ಸ್‌ಸ್ಸ್ ಬಗ್ಗ್'ಂತ ಬೆಂಕಿ ಹಿಡ್ದದೆ. ಆಗ ಬಗ್ಗಿ ನೋಡಿಕಂಡ್ ಹೋಸಕನ ಬುಗ್ಗ್ಂತ ಬೆಂಕಿ ಹಿಡ್ದ್ ಗಡ್ಡ ಮೀಸೆ ಪೂರ ಸುಟ್ಟ್‌ಕಂಡವ್ ಎಷ್ಟೋ ಒಳೊ. ಗ್ಯಾಸ್ ಲೈಟ್ ಹೊತ್ತಿದ ಮೇಲೆ ಆ ಸುತ್ತೆಲ್ಲಾ ಬೆಳಕೊ ಬೆಳಕ್. ಉಸ್ಸೊಂತ ಸದ್ದ್ ಮಾಡಿಕಂಡ್ ಲೈಟ್ ಹೊತ್ತ್‌ತಾ ಇದ್ದದೆ. ಮಕ್ಕ ಮರಿಗಳಿಗೆಲ್ಲಾ ಆಗ ಆ ಬೆಳ್‌ಕ್‌ಲಿ ಕೆಲ್ಸ ಜೋರು. ಲೈಟ್ ಹುಳಗೆಲ್ಲಾ ಆ ದೀಪಕ್ಕೆ ಮುತ್ತುತಾ ಇದ್ದವೆ. ಬಿಸಿ ಮುಟ್ಟಿ ಬೀಳ್ತಾ ಇದ್ದವೆ. ಇಸ್ಪೀಟ್ ಆಡವು ಚಾಪೆ ಹಾಸಿಕಂಡ್ ಆಟ ಆಡಿಕೆ ಕುದ್ದ್ ಬುಟ್ಟವೆ. ಪಡ್ಡೆ ಹೈದಂಗ ಮಂಡಿಹಿಡ್ಕಂಡ್ ಬಗ್ಗಿಬಗ್ಗಿ ನೋಡ್ತಾ ಇದ್ದವೆ. ನಾನೂ ಒಂದ್ ಕೈ ನೋಡದೆ ಬುಡಿಕಿಲೆತ ಲೆಕ್ಕ ಹಾಕಂಡವೆ. ಕೆಲವ್ ನಡ್ ಇರ್ಲ್ ಮುಟ್ಟ ಆಡಿರೆ ಮತ್ತೆ ಕೆಲವ್ ಬೆಳಗಾನ ಆಡಿವೆ. ಹಣ

ಮಾಡವ್ ಈ ನೆಪಲಿ ಹಣ ಮಾಡಿಕಂಡವೆ. ಕೆಲವ್ ಹಣ, ಉಂಗುರ, ಚೈನ್ ಕೊಡೆನೆಲ್ಲಾ ಕಳ್ಕಂಡ್ ಸದ್ದ್ ಮಾಡದೆ ಮನೆ ಸೇರಿಕಂಡವೆ. ಮನೆಲಿ ಹೆಣ್ಣ್‌ನ ಕೈಂದ ಮಂಗಳಾರತಿನೋ, ಪ್ರಸಾದನೋ ಇರ್ತಿತ್!

ಮೊದುವೆಯಂತ ಜಂಬರಲಿ ವಾಲಗಂತೂ ಇದ್ದೇ ಇರ್ತಿತ್. ಅದರ್ಲಿ ಕೊಂಬು ಊದುದೂ ಒಂದ್. ಆ ಊದುವ ಸಾಧನ ಆನೆದ್ ತುಂಬಿ ಕೈನಂಗೆ ಇದ್ದದೆ. ಆನೆ ಟ್ರಂಯೋೀತ ಸದ್ದ್ ಮಾಡ್ದರ ಕೊಂಬು ಹಿಡೆದುತ ಹೇಳಿವೆ. ಆನೆಗ ಅದೊಂದ್ ವಿಶೇಷ ರೀತಿಲಿ ದೊನಿ ಮಾಡಿವೆ. ಕೆಲವ್ ಆ ಘೀಳಿಡುವ ಸದ್ದ್‌ನ ಕಿರ್ಚುದುತ ಹೇಳಿವೆ. ಆದರೆ ಕತ್ತೆಗ ಸದ್ದ್ ಮಾಡ್ದರ್ನ ಮಾತ್ರ ಕಿರ್ಚುದುತ ಹೇಳ್ದು ಸರಿ. ಅದೇ ಮಾತ್‌ನ ಮನುಷ್ಯಂಗೂ ಹೇಳಿವೆ. ಕೆಲವ್ ಕೆಮಿ ದದ್ದಾತೋ ದೊಂಡೆ ಒಡ್ದೋತೊತ ಹೇಳ್ವಂಗೆ ಕಿರ್‌ಚ್‌ಕಂಡ್ ಮಾತಾಡಿವೆ. ಆಗ ಒಮ್ಮೆ ಸುಮ್ಮನಿರಿಯಪ್ಪಾ, ಅದ್ಯಾಕೆ ಹಂಗೆ ಕಿರ್‌ಚಿಯಾಂತ ಹೇಳಿ ಬಾಯಿ ಮುಚ್ಚುಸುದು ಉಟ್ಟು. ಹೇಳಕನ ಒಮ್ಮೆ ಮೆಲ್ಲಂಗೆ ಮಾತಾಡಿವೆ. ಮತ್ತೆ ಅದೇ ಚಾಳಿ. ಹಾರಾಡಿಕಂಡ್, ಕಿರ್ಚಾಡಿಕಂಡ್ ಅವರ ಗುಣನ ತೋರುಸಿವೆ.

ವಾಲಗದವು ಕೊಂಬು ಊದುದು ಯಾಕೆತ ಒಂದ್ ಪ್ರಶ್ನೆ ಉಟ್ಟು. ಯಾಕೆತೇಳ್ರೆ ಕೊಂಬು ಊದಂವ ನಾಕ್ ದಿಕ್ಕಿಗೂ ಕೊಂಬುನ ತಿರ್‌ಗಿಸಿಕಂಡ್ ಊದಿರೆ ನಾಕ್ ದಿಕ್ಕಂದ ಬರವುಕೆ ಗೊತ್ತಾದೆ. ಇಂತಾ ದಿಕ್ಕ್‌ಲಿ ಮನೆ ಇರ್ದುತ ಬರುವ ಜನಕೆ ಗೊತ್ತಾತಿತ್. ಅಷ್ಟೇ ಅಲ್ಲ, ಕೊಂಬುಕೊಟ್ಟ್ ವಾಲಗೆಲ್ಲಾ ಇತ್ತಪ್ಪಾತ ಜನ ನಾಕ್ ದಿನ ಮಾತಾಡಿಕಂಬತಿದ್ದೊ. ಹಿಂಗೆ ಡೋಲ್ ಸದ್ದ್, ಕೊಂಬು ಊದುವ ಸದ್ದ್‌ನ ಆಲ್ಸಿಕಂಡ್ ಕಾಡ್‌ದಾರಿಲಿ ಜನ ಜಂಬರದ ಮನೆಗೆ ಹೋತಿದ್ದೊ. ಆಗ ಅಲ್ಲಿ ಚಪ್ಪರದ ಹೊರಗೆ ಜನ ಬರುವಲ್ಲಿ ಅಂಗಳದ ಕರೆಲಿ ಕಾಲ್ ಕೈ ತೊಳೆಕೆತ ನೀರ್ ಹಂಡೆ ಇಸಿದ್ದವೆ. ಬಂದವ್‌ಕೆ ನೀರ್ ಕೊಡಿಕೆ ಒಂದಿಬ್ಬರ್ ಹೈದಂಗ ನಿತ್ತಿರ್‌ತಿದ್ದೊ. ನಂಟ್ರ್ ಬಂದಂಗೆ ಬಂದಂಗೆ ನೀರ್ ಕೊಡ್ದು ಆ ಮಕ್ಕಳ ಕೆಲ್ಸ. ಒಂದಿಬ್ಬರ್ ಹೆಣ್ಣ್ ಮಕ್ಕಳಿಗೆ ನೀರ್ ಹೊರುದೇ ಕೆಲ್ಸ. ಬಂದವ್ ಕಾಲ್ ಕೈ ತೊಳ್ಕಂಡ್ ಚಪ್ಪರದ ಕೆಳಗೆ ನುಗ್ಗಿವೆ. ಸಗಣಿ ಸಾರ್ಸಿದ ನೆಲ ತಂಪಾಗಿದ್ದದೆ. ಚಪ್ಪರಕೆ ಹಾಕಿದ ಹಸಿ ಸೊಪ್ಪು ಬಾಡಿಕಂಡ್ ಬಾಕನ ಏನೋ ಒಂಥರದ ಹಸಿ ವಾಸನೆ ಬರ್ತಿದ್ದದೆ. "ನಂಟ್ರ್ ಬಂದೊ ನಂಟ್ರ್ ಬಂದೊ"ತ ಹೇಳಿಕಂಡ್ ಮನೆಯವ್ ಗಡಿಬಿಡಿಲಿ ಹೊರಗೆ ಬಂದವೆ. "ಬಂದರಿ ದೊಡ್ಡಪ್ಪ, ಸೌಖ್ಯ ದೊಡ್ಡಪ್ಪ" – "ಸೌಖ್ಯವ್ವಾ," "ಬಂದರಿ ಮಾವಾ, ಸೌಖ್ಯನ? ಬಂದರಿ ಅತ್ತೆ, ಸೌಖ್ಯ ಅತ್ತೆ"–

"ಸೌಖ್ಯ ಸೌಖ್ಯ" ಹಿಂಗೆ ಹೇಳಿಕಂಡ್ ಕಾಲ್ ಹಿಡ್ದ್ ಗೌರವ ಕೊಟ್ಟವೆ. ಕರಿ ಕಾಫಿ ತಂದ್ ಕುಡೆಕೆ ಕೊಟ್ಟವೆ. ಏನೇ ಇರ್‌ಲಿ, ಗುಂಪುಲಿ ನಂಟ್ರ್ ಬಾಕನ ಆ ಗುಂಪ್‌ಲಿ ಮನಿ ಸೋದರತ್ತೆ, ಸೋದರ ಮಾವ ಒಳೊತಾದರೆ ಅವರ್ನ ಸುರೂಗೆ ಮಾತಾಡ್ಸಿರೆ ಬಚಾವ್. ಸೋದರ ಅತ್ತೆ, ಮತ್ತೆ ಸೋದರ ಮಾವ ಭಾರೀ ಪ್ರಮುಖರ್. ಅವರ್ನ ಸರಿಯಾಗಿ ಮಾತಾಡ್ಸದೆ ಹೋತೋ ಅವರ ಮೊಕ ಕೆಂಬಡೆ ಆಗಿಬುಟ್ಟದೆ. ಜಂಬರ ಮುಗಿವ ಮುಟ್ಟ ಅವರ ತಟ್ಟಿಕಂಡ್ ಮುಟ್ಟಿಕಂಡ್ ಮಾತಾಡ್ಸಿಕಂಡ್ ಕುಸಿಪಡ್ಸಿಕಂಡ್ ಇರೊಕು. ಜಂಬರಕೆ ಬಂದವರ ಗೌರವಂದ ಕಾಂಬೊಕು. ಅತಿಥಿ ದೇವೋಭವತ ಮಾತೇ ಉಟ್ಟಲ್ಲ?

ಅದ್ ಸರಿ, ಬಂದವರ್ನ ಚಾಚಾ ಹಿಡ್ದ್ ಕರ್ದವೆ. ಚಾಚಾ ಹಿಡ್ದ್ ಕರೆದುತ ಹೇಳ್ರೆ ಸಂಬಂಧ ಹಿಡ್ದ್ ಕರೆದುತ ಅರ್ಥ. ಹಂಗಾಗಿ ಅತ್ತೆ-ಮಾವ, ಅಕ್ಕ-ಭಾವ, ದೊಡ್ಡಪ-ದೊಡ್ಡವ, ಬೋಜಪ್ಪ-ಬೋಜವ್ವ, ಸಣ್ಣಪ-ಸಣ್ಣವ, ಕುಂಞಪ್ಪ-ಕುಂಞವ್ವತ ಕರೆದು ಒಂದ್ ಕ್ರಮ. ಬಂದವರೊಟ್ಟಿಗೆ ಅವರ್ನ ಯಾಕೆ ಕರ್ಕಂಡ್ ಬಾತ್ಲೆ, ಇವರ್ನ ಯಾಕೆ ಕರ್ಕಂಡ್ ಬಾತ್ಲೆ, ಬೆಳಿಗ್ಗೆ ಬೇಗ ಹೊರ್ಟೋಳರಿಯಾ? ಏನಾರಾಗಲಿ, ಅಂತೂ ಬಂದರಿಯಲ್ಲ, ದನಕರ್, ಹಂದಿ ಕೋಳಿ, ತೋಟ ತೊಡಿಗೆನೆಲ್ಲಾ ಆ ಒಂದ್ ಕ್ಷಣಲಿ ವಿಚಾರಿಸಿಕಂಡವೆ. ಹಿಂಗೆ ಮನೆಯವ್, ನೆರೆ-ಕರೆ, ಊರವ್, ಸಂಬಂಧಿಕರ್ ಎಲ್ಲಾ ಬಂದ್ ಕೂಡಿಕಂಡವೆ. ಹಿಂಗಿರಕನ... ಈ ರುಮಾಲ್ ಸುತ್ತಿಕೆ ಎಲ್ಲವುಕೆ ಬಾದುಲೆ. ರುಮಾಲ್ ಸುತ್ತವುಕೆ ವಿಶೇಷ ಗೌರವ ಉಟ್ಟು. ಮದುಮಂಜನ ತಲೆಗೆ ಪೇಟ ಇಸೊಕುತಾದರೆ ಅದೇ ಅಳ್ತೆ ಇರುವ ಒಬ್ಬನ ಕೂರ್ಸಿ ಅವನ ತಲೆಗೆ ರುಮಾಲ್‌ನ ಸುತ್ತಿ ಮತ್ತೆ ಅದೇ ಪೇಟನ ಮದುಮಂಜನ ತಲೆಗೆ ತೊಡ್ಸಿವೆ. ಪೂಜೆ ಒಂದರ ಬುಟ್ಟ್ ಬಾಕಿ ಯಾವ್ದೇ ಜಂಬರಲಿ ಜನರ ಗಲಗಲ ಸದ್ದ್ ಇದ್ದೇ ಇದ್ದದೆ. ಯಾಗೋ ಒಮ್ಮೆ ಒಟ್ಟಿಗೆ ಸೇರುದಲ್ಲ, ಹಂಗಾಗಿ ಮಾತೋ ಮಾತ್. ವಾಲಗದ ಆ ಸದ್ದ್ ಬೇರೆ! ಯಾರಿಗೆ ಎಷ್ಟ್ ಅರ್ಥ ಆತೋ ಏನೋ! ಅಂತೂ ಯಾರ ಬಾಯಿಗೂ ಪುರುಸೊತ್ತೇ ಇಲ್ಲೆ. ಮಾತ್, ತಮಾಸಿ, ನಗೆ ರಟ್ಟ್‌ತಾ ಇದ್ದದೆ. ಅಷ್ಟೊತ್ತಿಗೆ "ಊರವ್, ನಂಟ್ರ್, ಬಂಧುಬಾಂಧವೆಲ್ಲಾ ಊಟಕ್ಕೇಳಿ"ತ ಒಕ್ಲು ಯಜಮಾನ ನೀರ್ ಚೊಂಬುನ ತೋರ್ಸಿದೆ. ಹಿಂಗೆ ಒಕ್ಲು ಯಜಮಾನ ಹೇಳ್ದ ಮೇಲೆ ಕೈ ತೊಳ್ಕಂಡ್ ಉಂಬಕೆ ಕುದ್ದವೆ. ಕುದ್ದ್ ಉಂಬದೇ ಅಂದ್ ಇದ್ದ ಪದ್ಧತಿ. ಎಲೆ ಹಾಸಿ, ಅದ್ಕೆ ನೀರ್ ಕೊಟ್ಟ ಮೇಲೆ ಎಲೆ ತೊಳ್ಕಂಡವೆ. ಮತ್ತೆ ಊಟ ಇಕ್ಕ್‌ವೆ. ಊಟೆಲ್ಲಾ ಇಕ್ಕಿ ಆದ

ಮೇಲೆ "ಉಂಬೊನಲ್ಲಾ, ಊಟ ಮಾಡೊನಲ್ಲಾ"ಂತ ಆಚೆ ಈಚೆವ್ ಮಾತಾಡಿಕಂಡ್ ಉಂಬಕೆ ಸುರು ಮಾಡಿವೆ. ಊಟ ಇಕ್ಕವ್ ಒಂದರ ಹಿಂದೆ ಮತ್ತೊಂದರ ತಂದ್ ಕೇಳಿ ಕೇಳಿ ಇಕ್ಕಿವೆ. ಎರಡ್ ದಪ, ಮೂರ್ ದಪ ಕೇಳಿ ಇಕ್ಕಿ ಆದ ಮೇಲೆ ಎಲ್ಲರ ಊಟ ಆದರ ನೋಡಿಕಂಡ್ ಒಕ್ಲು ಯಜಮಾನ, 'ಕೈ ಬಾಯಿ ಒಪ್ಪಿತಾ'ತ ಕೇಳ್ದೆ. ಆಗ ಉಂಬವ್ 'ಓ ಕೈ ಬಾಯಿ ಒಪ್ಪಿತ್'ತ ಹೇಳಿಕಂಡ್ ಕೈ ತೊಳಕೆ ಹೋದವೆ. ಕೈ ತೊಳ್ದ್ ಅಲ್ಲೆ ನೇತಾಕಿದ ಟವಲ್‌ಗೆ ಕೈ ಪೂಜಿಕಂಡ್ ಗೈಪು ಹಂಞ ಸೂಂಟ್ರ್ ಬಂದಿತ್ತಲ್ಲಾ, ಎರಡ್ ಕಲ್ಲ್ ಉಪ್ಪು ಕಮ್ಮಿ ಆಗಿತ್ತಲ್ಲಾಂತ ಮಾತಾಡಿಕಂಡ್ ಎಲಡಿಕೆ ತಿಂಬಕೆ ಹೋದವೆ. ಒಂದ್ ತಟ್ಟೆಲಿ ಎಲಡಿಕೆ ಹೊಸೊಪ್ಪು ಇದ್ದರೆ ಇನ್ನೊಂದ್ ತಟ್ಟೆಲಿ ಬೀಡಿ ಬೆಂಕಿಪಟ್ನ, ಸಿಗರೇಟ್ ಇರ್ತಿತ್. ಚಪ್ಪರದ ಕೆಳಗೆ ಒಂದ್ ಕರೆಲಿ ಉಗೆಕೆತ ಮಣ್ಣ್ ತುಂಬಿದ ಕುಕ್ಕೆ ಇರ್ತಿತ್. ಹೆಣ್ಣ್ ಮಕ್ಕ ಎಲೆ ಅಡಿಕೆ ತಿಂಬಕನ ಸಾಮಾನ್ಯಾಗಿ ಒಂದಿಷ್ಟ್ ಸಿಂಹಿ ಅಡ್ಕೆನೂ, ಒಂದೆರ್ಡ್ ಎಲೆನೂ ಕೈ ಚೌಕಲಿ ಸುತ್ತಿಕಂಬತಿದ್ದೊ. ಮನೆಲಿ ಮಕ್ಕಳೋ, ಹಿರಿಯವ್ರೋ ಕಾದ್‌ಕಂಡ್ ಇದ್ದವುಕೆ ತಿಂಬಕೆ ಕೊಡ್ತಿದ್ದೊ. ಹತ್ರದ ಸಂಬಂಧಮನಿ ಆಗಿದ್ದರೆ ಮೊದುವೆ ಮನೆಯವ್ ಬುತ್ತಿಕಟ್ಟಿ ಕೊಡ್ತಿದ್ದೊ.

ಕೆಲವ್ ಸತಿ ಚಪ್ಪರ ಮೊದುವೆ ಜಂಬರಲಿ ಊಟಕೆ ಹಂಞ ಮುಂದೆ ಓ ಅಲ್ಲಿ, ಗುಡ್ಡದ ಹಕ್ಕಲೆ, ಹಟ್ಟಿಕರೆಲಿ, ಮರದ ಬುಡಂದ ಗುಸು ಗುಸು ಪಿಸಿ ಪಿಸಿ ಮಾತಾಡಿಕಂಡ್ ಡೋಸ್ ಹಾಕಂಡ್ ಬಾಯಿ ಸೀಟಿಕಂಡ್ ಬಾತಿದ್ದೊ. ಒಂದ್ ಕುಪ್ಪಿಗೆ ನಾಕೈದ್ ಜನ, ಆ ನಾಕೈದ್ ಜನಕೆ ಒಂದೇ ಗಲಾಸ್. ಹಂಗೆ ಕುಡೆಕನ ಗಲಾಸ್ ತೊಳೆಕುತೇನಿಲ್ಲೆ. ಗಲಾಸ್ ಮಡೆ ಆತ್‌ತೇಳ್ವ ಪ್ರಶ್ನೆನೇ ಇಲ್ಲೆ. ಕುಪ್ಪಿ ಖಾಲಿ ಆಕು ಅಷ್ಟೆ. ಹಂಗೆ ಕುಡ್ಕಂಡ್ ಬಂದವ್ ಉಂಬಕೆ ಕೂರ್ತಿದ್ದೊ. ಉಂಬಕೆ ಕೂರಕನ ಜೋಬುಲಿ ನಿಂಬುಳಿ, ಚಾಕ್ ಇದೆಲ್ಲ ಇರ್ತಿತ್. ಇಕ್ಕಿಕಂಡ್ ಬಾಕನ ನಿಂಬುಳಿನ ಕೊಯ್ದ್ ಮಾಸ ಗೈಪುಗೆ ಹಿಂಡಿಕಂಡ್ 'ಪಟ್ಟ' ಉಂಬೊತಿದ್ದೊ. ಕಿನಾರ ಕುದ್ದ್ ಮನಾರ ಉಂಬೊದುತ ಹೇಳಿವೆಯಲ್ಲ, ಹಂಗೆ ಪಟ್ಟ ಉಂಡ್ ನಗೆ ಮೊಕ ಮಾಡಿಕಂಡ್ ಕೈ ತೊಳೆಕೆ ಹೋತಿದ್ದೊ. ಮತ್ತೆ ಕೊಣ್ತ ಸುರಾತಿತ್.

ವಾದ್ಯಕ್ಕೆ ತಕ್ಕಂಗೆ ಕೊಣಿಯೊದು ಒಂದ್ ಕಲೆ. ಕೆಲವ್ರ ಕೊಣ್ತ ನೋಡ್ದೇ ಒಂದ್ ಪೊರ್ಲು. ಅದ್ಕೆ ವಯಸ್ಸ್‌ನ ಮಿತಿಗಿತಿಯಿಲ್ಲೆ. ನಡೆಕೆ ಕಲ್ತ ಮಕ್ಕಳ್‌ಂದ ಹಿಡ್ದ್ ನಡೆಕೆ ತಾಕತ್ ಇರ್‌ವ ಹಿರಿಯವ್‌ಸನ ಕೊಣೆತಿದ್ದೊ. ನಡೂ ವಯಸ್‌ನವರ ಕೈಲಿ ಗಲಾಸ್ ಇರ್ತಿತ್. ಒಂದೇ ಒಂದ್ ತುಳಿ ತುಳ್ಕದಂಗೆ ಎಚ್ಚರ ವಹಿಸಿಕಂಡ್

ಒಂದೊಂದೇ ಗುಟುಕು ಕುಡ್ಕಂಡ್ ಕೊಣ್ತಿದ್ದೊ. ಮತ್ತೆ ಕೆಲವ್ ಬೀಡಿನೋ ಸಿಗರೇಟ್‌ನೊ ಸೇದಿಕಂಡ್ ಹೆಜ್ಜೆ ಹಾಕ್ತಿದ್ದೊ. ಯಾರ್‍ಯಾರಿಗೊ ಮುಟ್ಟಿರೂ ಗೊತ್ತಿಲ್ಲೆ, ಸುಟ್ಟರೂ ಗೊತ್ತಿಲ್ಲೆ. ಅಷ್ಟ್ ಅಗಲದ ಜಾಗೆ ಒಬ್ಬಂಗೇ ಬೇಕಾತಿತ್ತ್. ಹೆಟ್ಟಿಕಂಡ್, ಕುಟ್ಟಿಕಂಡ್, ಮೆಟ್ಟಿಕಂಡ್, ರಟ್ಟಿಕಂಡ್ ಕೊಣ್ತಿದ್ದೊ. ನಾಚಿಕೆ ಸೊಬಾವದವ್ ಮರೆ ಮರೆ ಹೋಗಿ ಕೊಣ್ದರೆ, ಮತ್ತೆ ಕೆಲವ್ ಹಗ್ಲ್ ಕೊಣೆಕೇ ಹೋತಿತ್ಲೆ. ಕತ್ತಲೆಲಿ ಹೆಂಗೆ ಕೊಣ್ದರೂ ನಡ್ದದೆ.

ಕೊಣ್ತಲಿ ಬೇರೆ ಬೇರೆ ಥರದ ಕೊಣ್ತ ಉಟ್ಟು. ಅಂತದರ್ಲಿ ಹಾವಾಟನೂ ಒಂದ್. ಸರ್ಪ ಜಡೆ ಬಿಚ್ಚಿದಂಗೆ ಮಾಡಿಕಂಡ್ ಒಂದಿಬ್ಬರ್ ಕೊಣೆಕೆ ಸುರು ಮಾಡಿರಂತೂ ಬಾಕಿದ್ದವೂ ಹಂಗೇ ಕೊಣೆಕೆ ಪ್ರಯತ್ನ ಪಡ್ತಿದ್ದೊ. ಸುರೂಗೆ ಜಡೆ ಬಿಚ್ಚಿದಂಗೆ ಕೈನ ಮಾಡಿಕಂಡ್ ನಿತ್ತ್‌ಕಂಡ್ ಕೊಣ್ತಿದ್ದೊ. ಮತ್ತೆ ಬಗ್ಗಿಕಂಡ್ ಜಡೆ ಆಡ್ಸಿದಂಗೆ ಮಾಡ್ತಿದ್ದೊ. ಮತ್ತೆ ಕುಕ್ಕರ್ ಕಾಲ್‌ಲಿ ಕುದ್ದ್‌ಕಂಡ್ ಸೊಂಟ ಆಡ್ಸಿಕಂಡ್ ಕೊಣ್ದರೆ ಮತ್ತೆ ಈರ್‌ಮಂಡ್ ಹಾಕಂಡ್ ಕೊಣ್ತಿದ್ದೊ. ಈರ್ ಮಂಡ್‌ತ್ತೇಳ್ರೆ ಮೊಣಕಾಲ್ ಊರಿಕಂಡ್‌ತ ಅರ್ಥ. ಹಿಂಗೆ ಈರ್‌ಮಂಡ್ ಹಾಕಂಡ್ ಕೊಣ್ದ ಮೇಲೆ ಉದ್ದೋಕೆ ಮಲ್ಕಂಡ್ ಕೈ ಆಡ್ಸಿಕಂಡ್ ಪ್ರದರ್ಶನ ಕೊಡ್ತಿದ್ದೊ. ಆ ರೀತಿ ಮನರಂಜನೆ ಕೊಡ್ತಿದ್ದವ್ರ ಬಗ್ಗೆ ಒಂದ್ ರೀತಿಯ ಗೌರವ ಇರ್ತಿತ್ತ್. ಹೆಣ್ಮಕ್ಕ ಗುಸುಗುಸು ಪಿಸಿ ಪಿಸಿ ಮಾತಾಡಿಕಂಡ್ ಗುಂಪು ಗುಂಪಾಗಿ ನಿತ್ತ್ ನೋಡ್ತಿದ್ದೊ. ಡೋಲು ಹೊಡೆವ್ ಡೋಲ್ ಹೊಡ್ದ್ ಹೊಡ್ದ್ ಸುಸ್ತಾಗ್‌ತಿದ್ದೊ. ಒಬ್ಬಂತೂ ಪೇಂಯ್‌ತ ಒಂದೇ ಸೊರಲಿ ಗಂಟೆವರೆಗೂ ಊದಿಕಂಡೇ ಇದ್ದದೆ. ಬಾಯಿ ತುಂಬ ಗಾಳಿ ತುಂಬಿಕಂಡ್ ಕೆನ್ನೆ ಪೂರ ಊದಿಕಂಡೇ ಇದ್ದದೆ. ಪದ ನುಡ್ಸಂವ ಮಾತ್ರ (ವಾಲನಗ) ಆಚೆ ಈಚೆ, ಕೆಳಗೆ ಮೇಲೆ ಮಾಡಿಕಂಡ್ ನುಡ್ಸುದರ ಕೇಳಿಕೆ ಎರಡ್ ಕೆಮಿ ಸಾಲಿಕೆಲಿತೇಳ್ವಂಗೆ ಊದಿ ಮನರಂಜನೆ ಕೊಟ್ಟದೆ. ಹಿಂಗೆ ಪದ ನುಡ್ಸುದು, ಡೋಲು ಹೊಡೆದು ಅದ್ಭುತ ಜಾನಪದ ಕಲೆ. ಕೊಣ್ದ್ ಕುಸಿಪಟ್ಟ್ ನೋಡವುಕೆ ಕುಸಿ ಕೊಡುವ ಜನಕೂ ಸನ ಜಾನಪದ ಕಲಾವಿದರ್‌ತೇ ಹೇಳಕ್.

ಕೆಲವ್ ಸತಿ ನಗೆ ಹೊಗೆ ಆಗಿಬುಟ್ಟದೆ. ಎಲ್ಲೊ ಹುಟ್ಟಿಕಂಡ ಸಿಟ್ಟ್ ಇನ್ನೆಲ್ಲೊ ರಟ್ಟಿದೆ. ಕೊಣೆಕನ ಕಾಲ್ ಮೆಟ್ಟಿದರ್‍ನ ನೆವನ ಮಾಡಿಕಂಡ್ ಮೆಲ್ಲ ಮೆಲ್ಲ ಸುರಾದ ಜಗಳ ದೊಡ್ಡ ಹೊಡ್ದಾಟಲಿ ಕಡೆ ಆದೆ. ಆ ಜಗಳ ಅಂಗಳಲಿ ಪೂರ್ತಿ ಆಗದಿದ್ದರೆ ಉಂಬಕೆ ಕೂರಕನಾರ್ ಮತ್ತೆ ಸುರಾದೆ. ಒಂದ್ ಹಂತಿ ಊಟಕೆ ಕುದ್ದಿದ್ದವೆ. ಊಟ ಇಕ್ಕಿ ಆತ್. ಅರ್ಥ ಉಂಡಾತೋ ಇಲ್ಲೆಯೋ ಮಾತ್‌ಗೆ

ಮಾತ್ ಬೆಳ್ದದೆ. ಕಡೆಗೆ ಊಟದ ಬೆಂಚ್‌ನೇ ನೂಕಿ ಹಾಕಿವೆ. ಚಪ್ಪರನ ಎಳ್ದ್ ಹಾಕಿವೆ. ಗಲಾಸ್, ಊಟ ಗೀಟೆಲ್ಲಾ ತಾರಾಮಾರಾಗಿ ಚೆಲ್ಲಾಡಿ ಹೋದೆ. ಉಂಬಕೆ ಕುದ್ದವೆಲ್ಲಾ ಅರ್ಧಲೇ ಎದ್ದ್‌ಬುಟ್ಟವೆ. ಏನ್ ಎಂತತ ಅತ್ತ ಇತ್ತ ನೋಡ್‌ವಷ್ಟರ್‌ಲಿ ಪೆಟ್ಟಾಟ, ಮೆಟ್ಟಾಟ ಸುರಾಗಿದ್ದದೆ. ಕಂಬಕೆ ನೇತಾಕಿದ್ದ ಗ್ಯಾಸ್‌ಲೈಟ್, ಲಾಟೀನ್, ದೊಂದಿಗಿಂದಿ ಪೂರಾ ರಟ್ಟಿ ಹೋಗಿದ್ದದೆ. ಯಾರ್ ಯಾರಿಗೆ ಹೊಡ್ದೊ, ಯಾರ್ ಯಾರ್‌ಗೆ ಒದ್ದೊ ಏನೋ? ಗುಂಪ್‌ಲಿ ಗೋವಿಂದತ ಹೇಳ್ವಂಗೆ "ಹೋ ಅಯ್ಯೋ"ತ ಬೊಬ್ಬೆ ಸುರಾಬುಟ್ಟದೆ. ಹೊಡಿಪೊಡಿ ಮಕ್ಕಳಿಗೆ ಏನ್ ಎಂತಾತ ಗೊತ್ತಾಗದೆ ಗೊಳೋತ ಮರ್ಟವೆ. ಅಷ್ಟೊತ್ತಿಗೆ ಅಯ್ಯೆಕ ಓಡಿ ಬಂದ್ ಅವ್ರವ್ರ ಮಕ್ಕಳ್ನ ತೆತ್ತಿಕಂಡ್ ಓಡಿವೆ. ಅರ್ಧಕರ್ಧ ಜನ ಹೋಗಿಬುಟ್ಟವೆ. ಮಾಡ್ದ ಅಡ್ಗೆ ಪೂರಾ ಹಾಳ್. ನಾಳೆ ಮೂಹೂರ್ತದ ಮಧ್ಯಾಹ್ನದ ಊಟಕೆ ಅಡ್ಗೆ ಮಾಡೊಕು. ಚೇ, ಕಷ್ಟಪಟ್ಟ್ ಕಾರ್‌ಬಾರ್ ಮಾಡಕನ ಇನ್ಯಾರೋ ಬಂದ್ ಇಡೀ ಜಂಬರನ ಹಾಳ್ ಮಾಡ್ದು ಎಷ್ಟ್ ಸರಿ? ಹಿಂಗೆ ಎಲ್ಲಾ ಜಂಬರಗಳ್‌ಲಿ ಆತಿತ್‌ತ ಅಲ್ಲ. ಅಂತೂ ಹತ್ತ್ ಜಂಬರಲಿ ಐದಾರ್ ಕಡೆ ಜಗಳ ಆಗೇ ಆತಿತ್. ಪುಂಡರ್ ಬಂದ್ ಗಲಾಟೆ ಮಾಡೇ ಮಾಡ್ತಿದ್ದೊ. ಏನೇ ಆದರೂ ಜಂಬರ ಮಾತ್ರ ನಿಲ್ಲ್‌ತಿತ್‌ಲೆ.

ಹಿಂದೆಲ್ಲಾ ವಾಹನಗಳ ಸೌಲಭ್ಯ ಇತ್ತ್‌ಲೆ. ಹಂಗಾಗಿ ದಿಬ್ಬಣ ಹೋದು, ಬಾದು ಎಲ್ಲಾ ನಡ್ಕಂಡೇ ಆತಿತ್. ರಾತಾ ರಾತ್ರೆ ದಿಬ್ಬಣ ಹೋತಿದ್ದೊ. ಕೆಲವ್ ಸತಿ ಮಳೆನೂ ಇರ್ತಿತ್. ಕೊಡೆ ಬುಡ್ಸಿಕಂಡ್ ದೊಂದಿ ಹೋಸಿಕಂಡೊ ಲಾಟೀನ್ ಹೋಸಿಕಂಡೋ ಹೋಕಾಗಿತ್. ಕಾಡ್‌ದಾರಿ, ಗದ್ದೆ ಏರಿ, ತೋಡ್ ಇಳ್ದ್, ಕಡ್ಕಲ್ ಹತ್ತಿ, ಎಡ್ಗಿಕಂಡ್ ರಟ್ಟಿಕಂಡ್ ದಿಬ್ಬಣ ಹೋಗಿ ಗೂಡೆನ ಕರ್ಕಂಡ್ ಬಾದು ಸಾಮಾನ್ಯ ಕೆಲ್ಸ ಅಲ್ಲ. ಚಳಿ, ಮಳೆ, ಅದ್ರೊಟ್ಟಿಗೆ ಉಂಬುಳು ಕಾಟ ಬೇರೆ. ರಕ್ತ ಕುಡ್ದ್ ಅಮೆ ಹಣ್ಣ್‌ನಂಗೆ ಹಣ್ಣಾಗಿ ಬೀಳ್ತಿದ್ದೊ. ಹೆಣ್ಣ್ ಕರ್ಕಂಡ್ ಬಾಕನ ಕೋಳಿ ಕೂಂಗ್‌ವ ಹೊತ್ತಾತಿತ್. ಮತ್ತೆ ಬೆಳಿಗ್ಗೆ ಹತ್ತ್ ಹತ್ತೂವರೆಗೆ ಮೂರ್ತಕೆ ಕುದ್‌ರ್ಸ್ತಿದ್ದೊ. ಗೂಡೆದ್ ಗೋಳು. ಯಾಕೆತೇಳ್ರೆ ಗೂಡೆ ಮನೆಲಿ ಒಂದ್ ಚಪ್ಪರ, ಮಾರ್ನೆಗೆ ಮೂರ್ತ, ಅದೇ ಇರ್ಲ್ ದಿಬ್ಬಣ, ಅದೋ ನಡ್ದೇ ಹೈದನ ಮನೆ ಸೇರ್ದು, ಮತ್ತೆ ದಂಪತಿ ಮೂರ್ತ. ಅಷ್ಟೇ ಅಲ್ಲ, ಗದ್ದೆಗೆ ಗೊಬ್ಬರ ಹೊರೊಕು, ಬಾಕನ ನೀರ್ ತರೊಕು. ಈ ಎಲ್ಲಾ ಶಾಸ್ತ್ರ ಆಕನ ಗೂಡೆ ಕಟ್ಟದ ಕೋಳಿ ಹಂಗೆ ಒರ್‌ಗಿ ನಿಲ್ಲಿಕೂ ತ್ರಾಣ ಇಲ್ಲದಷ್ಟ್ ಸುಸ್ತಾಗಿದ್ದದೆ.

ಆಗೆಲ್ಲಾ ಮೂರ್ತಲಿ ಹಣ ಕಟ್ಟ್‌ತ್ತಿದ್ದದ್ ಒಂದೇ ಒಂದ್ ರೂಪಾಯಿ. ಮತ್ತೆ ಎರಡ್ ರೂಪಾಯಿಗೆ ಏರ್ತ್. ಎಷ್ಟೋ ವರ್ಷ ಕಳ್ದ ಮೇಲೆ ಐದ್ ರೂಪಾಯಿಗೆ ಏರ್ತ್. ಹಣ ಕಟ್ಟಕನ ಆಗೆಲ್ಲಾ ಕವರ್ ಗಿವರ್ ಇತ್ಲೆ. ತಲೆಗೆ ಅಕ್ಕಿ ಹಾಕುದು, ಕೈಗೆ ಹಣ ತುರ್ಕುದು ಮಾಡ್ತಿದ್ದೊ. ಒಮ್ಮೆ ಒಂದ್ ಕಡೆ ಏನಾತ್‌ತೇಳ್ರೆ ಹಣ ಕಟ್ಟವ್ ಕಟ್ಟ್‌ತಿದ್ದೊ, ಊಟ ಮಾಡವ್ ಮಾಡ್ತಿದ್ದೊ. ಅಷ್ಟೊತ್ತಿಗೆ ಒಬ್ಬ ಓಡಿ ಬಾತ್. ಓಡಿ ಬಂದ್ ಮದುವಣ್ಣನ ಕೆಮಿಲಿ "ಅಣ್ಣ ಅಣ್ಣ ಆನೆ ಕಪ್ಪದೊಳಗೆ ನಿಮ್ಮ ಕರ್ ಬಿದ್ದೋವುಟು"ತ ಹೇಳ್ತ್. ಆಗ ಆ ಸುತ್ತೆಲ್ಲಾ ಆನೆಗಳ್‌ದೇ ಕಾರ್‌ಬಾರ್. ಹಂಗಾಗಿ ಆನೆ ಬೀಳ್ಸಿಕೆತ ತೋಂಡಿದ್ದ ಹಳೆ ಕಪ್ಪದೊಳಗೆ ಮೇದ್‌ಕಂಡ್ ಹೋದ ಕರ್ ಬಿದ್ದೋವುಟು. ಈಗ ಏನ್ ಮಾಡ್ದು? ಕೆಲವ್ ಶೂರರ್ ಅತ್ತ ಓಡ್ದೊ. ಒಂದಿಬ್ಬರ್ ಕಪ್ಪದೊಳಗೆ ಇಳ್ದೊ. ಕರ್‌ಗೆ ಹಗ್ಗ ಹಾಕಿದೊ. ಬಾಕಿದ್ದವ್ ಕರ್‌ನ ಎಳ್ದ್ ಮೇಲೆ ಹಾಕಿದೊ. ಕರ್‌ದ್ ಜೀವ ಉಳ್ತ್. ಹಿಂದಕೆ ಬಂದ ಶೂರರ್ ಮೂರ್ತದ ಊಟನ ಪಟ್ಟ ಜಡ್ದೊ.

ಸುಮಾರ್ ಅರವತ್ತು ಎಪ್ಪತ್ತು ವರ್ಷಗಳ ಹಿಂದೆ ಮೊದುವೆ ಚಪ್ಪರದ ಊಟಕ್ಕೆ ಕುದ್ದಲ್ಲಿಗೆ ಕಳ್ಳು ಕುಡೆಕೆ ಕೊಡ್ತಿತ್‌ಲೆ. ಕಳ್ಳ್ ಕುಡೆವು ಬಾಕನೇ ಕುಡ್ಕಂಡ್ ಬಾತಿದ್ದೊ. ಐವತ್ತು ಅರವತ್ತು ವರ್ಷಗಳ ಈಚೆ ಊಟ ಮಾಡಿಕೆತ ಕುದ್ದಲ್ಲಿಗೆ ಕಳ್ಳು ಕೊಡಿಕೆ ಸುರಾತ್. ಬೇಕಷ್ಟ್ ಬೈನೆ ಕಳ್ಳ್ ಇದ್ದ ಕಾಲ ಅದ್. ನಾಡ್ ಸಾರಾಯಿಯೂ ಇರ್ತಿತ್ತ್. ಬತ್ತ ಸಾರಾಯಿ, ಗೇರ್ ಹಣ್ಣ್ ಸಾರಾಯಿತೆಲ್ಲಾ ಇದ್ದ ಕಾಲ. ಆ ಕಾಲ ಕಳೀತಿದ್ದಂಗೆ ನಾಡ್ ಸಾರಾಯಿ ಮಾಡಿಕೆ ಬತ್ತೇ ಬತ್ತ್‌ತ ಆದ ಮೇಲೆ ಕಾಟಿ ಸಾರಾಯಿ ಬಾತ್. ಅದೂ ನಿತ್ತ ಮೇಲೆ ರಮ್, ವಿಸ್ಕಿ, ಬ್ರಾಂಡಿತೆಲ್ಲಾ ಬಾತ್. ಅದ್ ಬಂದರೂ ಚಪ್ಪರದ ಊಟಕ್ಕೆ ಮಾತ್ರ ಕುದ್ದಲ್ಲಿಗೇ ಕೊಡುತ್ತಿದ್ದೊ. ಮತ್ತೆ ಮೂರ್ತದ ಮಧ್ಯಾಹ್ನಕ್ಕೆ ಕೊಡಿಕೆ ಸುರಾತ್. ಅಷ್ಟೇ ಅಲ್ಲ, ಈಗೀಗ ಮೂರ್ತದ ದಿನ ಸನ 'ಓಪನ್ ಬಾರ್' ಇದ್ದದೆ. ಅದೊಂದ್ ರೀತಿಯ 'ಪ್ರತಿಷ್ಠೆ' ಆಗೋಗುಟು. ಕೈಲಿ ಗಲಾಸ್ ಇಲ್ಲದವು ಯಾರೊಳೊತ ಹುಡ್ಕಿಕಾದೆ. ಮುಂದೆ ಅದು ಎಲ್ಲಿಗೆ ಬಂದ್ ನಿತ್ತದೆಯೋ ಏನೋ.....

* * * * *

# ಮೌನ ಆದ ಮನೆ

ಕರ್‌ಬುಡಿಕಿರುವ ಒಂದ್ ಒಳ್ಳ ಹಸ್ ಅಷ್ಟ್ ಸುಲಭಕ್ಕೆ ಸಿಕ್ಕುದುಲೆ. ಅವರಿವರ ಕೇಳೊಕು, ಊರೂರು ಸುತ್ತೊಕು. ಸಾಮಾನ್ಯಾಗಿ ಕರ್‌ಬುಡವು ಹಸ್‌ನ ಮಾರಾಟ ಮಾಡ್ದೊ ಕಮ್ಮಿ. ಈಗ ಬುಡಿ ಸಿಂಧಿ ಹಸ್‌ಗ ಬೇಕಷ್ಟ್ ಸಿಕ್ಕಿವೆ. ಪೂರ್ತಿ ಹಣ ಕೊಡೊಕುತನೂ ಇಲ್ಲೆ. ಸರಕಾರ ಸಾಲ ರೂಪಲಿ ಹಸ್‌ಗಳ ಕೊಡ್ದು ಈಗ ನಡೀತ ಉಟ್ಟು. ನಾ ಹೇಳ್ತಿರ್ದು ತುಂಬ ಹಿಂದೆನ ವಿಚಾರ. ಆಗ ಇದ್ದದ್ ಬರೀ ನಾಡ್ ಜಾತಿಗ. ಆದರೂ ಕರ್ ಬುಡುವ ಒಳ್ಳ ಹಸ್ ಮಾತ್ರ ಸಿಕ್ಕಿರೆ ಅದ್ ಅವರ ಪುಣ್ಯತ ಹೇಳಕ್. ಕೆಲ ಜನ ಒಂದೋ ಕಡ್ಸ್ ಆಗಿರಕನ ಮಾರಿವೆ. ಅದಿಲ್ಲರೆ ಗಬ್ಬ ಆದ ಹಸ್‌ನ ಮಾರಿವೆ. ಎಲ್ಲಾರ್ ಖರ್ಚಿಗೆ ಮನಿ ಎದ್ರ್ ಮುಟ್ಟಿ ಹೋದವ್ ಮಾತ್ರ ಕರ್‌ಬುಡುವ ಹಸ್‌ನ ಮಾರ್ದು ಉಟ್ಟು. ಕೆಲವ್ ಸತಿ ಹಾಲ್ ಬಚ್ಚಿದ ಹಸ್‌ನ ಮಾತ್ರ ಮಾರಿವೆ.

ಅದೆಷ್ಟೋ ಮನೆಗಳ್‌ಲಿ ಅವ್ವ ಮತ್ತೆ ಮಕ್ಕ ಕರ್‌ಬುಡುವ ಹಸ್‌ನ ಸುತಾರಾಂ ಮಾರಿಕೆ ಒಪ್ಪುದುಲೆ. ಕರ್‌ಬುಡುವ ಹಸ್‌ನ ಅಪ್ಪ ಮಾರ್ದೆಗಡಾತ ಗೊತ್ತಾದಲ್ಲಿಂದ ಮಕ್ಕ ಕುಸುಕೂಡಿಕೆ ಸುರುಮಾಡಿವೆ. ಅವ್ವ ದುಕ್ಕನ ನುಂಗಿಕಂಡದೆ. ಹಸ್‌ನ ಕೊಡ್ದು ಬ್ಯಾಡಾತ ಅಪ್ಪಂಗೆ ಹೇಳವ್ವಾತ ಮಕ್ಕ ಒತ್ತಾಯ ಮಾಡಿವೆ. ಆದರೆ ಅವ್ವಂಗೆ ಅಪ್ಪನಕ್ಕಲೆ ಹೇಳುವ ಧೈರ್ಯ ಇಲ್ಲೆ. ಧೈರ್ಯ ಇದ್ದರೂ ಮನೆದ್ ಕಷ್ಟ ಅವ್ವಂಗೂ ಗೊತ್ತುಟು. ಕೊಟಗೆ ರಿಪೇರಿ ಆಕು, ಮಕ್ಕಳ ಇಸ್ಕೂಲು ಫೀಸ್ ಕಟ್ಟೋಕು, ನಾಟಿಕೆಲ್ಸಕೂ ಬೇಕ್, ಮಳೆಗಾಲದ ಖರ್ಚಿಗೂ ಆಕು. ಇದ್ಕೆಲ್ಲಾ ದುಡ್ಡು ಹೊಂದ್‌ಸೋಕುತೇಳ್ರೆ ಹಸ್‌ನ ಮಾರೇ ಮಾರೊಕು. ಆ ಹಸ್ಸೊ ಪರಮ ಸಾಧು ಹಸ್. ಕರ್ ಅಂತೂ ಬೆಣ್ಣೆ ಮುದ್ದೆ. ರಜ ಇರಕನಂತೂ ಮಕ್ಕಳಿಗೆ ಬೆಳಿಗ್ಗೆ

ಎದ್ದಲ್ಲಿಂದ ಆ ಕರ್‌ನೊಟ್ಟಿಗೇ ಆಟ, ಅದರ್ನ ತಬ್ಬಿಕಂಬೋದು, ಅದರ ಮೊಕನ ಪೂಜುದು ಅದರ ಹಣೆಗೆ ತಲೆಕೊಡುದು, ನನ್ನ ಚಿನ್ನ, ನನ್ನ ರಾಜತೆಲ್ಲಾ ಹೇಳಿಕಂಡ್ ಅದರ ಬೆನ್ನ್ ಹೊಟ್ಟೆನೆಲ್ಲಾ ಕೆರಿಯೊದು, ಹಿಂಗೆಲ್ಲಾ ಮಾಡಕನ ಆ ಕರೂ ಸನ ಈ ಮಕ್ಕ ಹತ್ರ ಬಾದರ್ನೇ ಕಾಯೊದು. ಮಕ್ಕ ಹತ್ರ ಬಂದಂಗೆ ಮಕ್ಕಳ ಮೈ ಕೈ ಮೊಕನೆಲ್ಲಾ ನೆಕ್ಕುದು, ಗುದ್ದುದು ಮಾಡ್ದೆ. ಆಗ ಈ ಮಕ್ಕಳ ನಗೆ, ಕೊಣ್ತನೆಲ್ಲಾ ನೋಡುದೇ ಒಂದ್ ಹಬ್ಬ. ಆ ಹಸೂ ಅಷ್ಟೇ. ಮಕ್ಕ ಹತ್ರ ಬಾಕನ ಮಕ್ಕಳ ಕೈನೇ ನೋಡ್ತು, ರೊಟ್ಟಿ, ದೋಸೆ, ಹಲ್‌ಸ್‌ನ ಹಣ್ಣ್‌ದ್ ರಚ್ಚೆ, ಬಾಳೆ ಹಣ್ಣ್‌ದ್ ತೊಪ್ಪೆನೆಲ್ಲಾ ಕೊಟ್ಟ್ ಅಭ್ಯಾಸ. ಹಂಗಾಗಿ ಹಸ್ ಒಮ್ಮೆ ಸನ ಕೊಂಬ್ ಆಡ್ಸಿದಾಗಲಿ ದುಂಡುಲಿ ಉಂದಿದಾಗಲಿ, ಕರ್‌ಬುಡಕನ ಒದೆಕೆ ಕಾಲ್ ಎತ್ತಿದಾಗಲಿ ಮಾಡ್ದ ಹಸ್ ಅಲ್ಲ. ಹಿಂಗಿರ್‌ವ ಹಸ್ ಕರ್‌ನ ಮಕ್ಕಳ್‌ಂದ ದೂರ ಮಾಡ್ದುತೇಳ್ರೆ ದುಕ್ಕ ಬರದೇ ಇದ್ದದೆನಾ? ಹೆಂಗಿದ್ದರೇನ್‌ಗಡ, ಹಸ್‌ನ ಮಾರದೆ ನಿಮೂರ್ತಿಯಿಲ್ಲೆ. ಹಸ್‌ನ ಮಾರ್ದುತ ಅಪ್ಪ ಒಮ್ಮೆ ತೀಮಾನ ಮಾಡ್ದಮೇಲೆ ಆತ್. ಮತ್ತೆ ಮನ್ಸ್ ಬದ್‌ಲ್‌ಸುವ ಪೈಕಿ ಅಲ್ಲ. ಎಷ್ಟೋ ಕಡೆ ಅದೆಷ್ಟೊ ವರ್ಷಗಳ್‌ಂದ ಹೂಡಿ ಹೆಗ್ಲ್ ಹೊಡಿ ಮಾಡಿಕಂಡ್ ಮನೆಯವುಕೆ ಬದ್ಕ್ ಕೊಟ್ಟ ಎತ್‌ಗ ವಯಸ್ಸಾಗಿ "ಲಾಚಾರಾಗೊಳೊ ಇನ್ನೆಂತಕೆ"ತ ಮಾರಿಬುಟ್ಟವೆ.

ಅದಿರ್ಲಿ. ಒಂದಿನ ಬೆಳಿಗ್ಗೆ ನಾಯಿಗ ಕಚ್ಚಿಬುಟ್ಟಂಗೆ ಬೊಗ್‌ಳಿಕಂಡ್ ದಾರಿಕಡೆ ಓಡ್ದೊ. ಯಾಕೆ ಏನ್‌ತ ಮನೆಯವ್ ಅತ್ತ ನೋಡಿವೆ, ಒಂದಿಬ್ಬರ್ ಇತ್ತಳೇ ಬರ್‌ತಿದ್ದೊ. ಅವು ಬಳ್ಳಿನ ತೆಕ್ಕೆ ಮಾಡಿ ಹೆಗ್ಲ್‌ಲಿ ಕೋಸಿಕಂಡಿದ್ದರ ನೋಡಕನ ಓ! ಇವ್ ದನ ಯಾಪಾರಕೆ ಬಂದವ್‌ತ ಅಪ್ಪಂಗೆ ಗೊತ್ತಾದೆ. ಮನ್ಸೊಳಗೆ ಕುಸೀ ಆದೆ. ಈಗ ಅವ್ವ ಮಕ್ಕಳಿಗೂ ವಿಷಯ ಗೊತ್ತಾತ್. ಮಕ್ಕ ಕುಸುಕೂಡಿಕಂಡ್ "ಹಸ್‌ನ ಕೊಡ್ದು ಬ್ಯಾಡತ ಹೇಳವ್ವಾ"ತ ಅವ್ವನ ಸೆರ್‌ಗ್ ಒಳಗೆ ತಲೆ ಹಾಕಂಡ್ ಮಟ್ಟೊ. ಅವ್ವನ ದುಕ್ಕ ದೊಂಡೆಲೇ ಸೆಕ್ಕಿಕಂಡತ್. ಅಪ್ಪಂಗೆ ದುಕ್ಕ ಇಲ್ಲೆತ ಅಲ್ಲ. ಆದರೆ ತೋರ್ಸಿಕಂಡತ್‌ಲೆ. ಸರಿ, ಬಂದವ್‌ಕೆ ಅವ್ವ ಕರಿ ಕಾಫಿ ಕೊಟ್ಟತ್. ಅಪ್ಪನೊಟ್ಟಿಗೆ ಅವು ಮಾತ್‌ಕತೆ ನಡ್ಸಿದೊ. ಅವ್ವ ಬಂದವರ್ನ ಕೊಟ್ಟಗೆಗೆ ಕರ್ಕಂಡ್ ಹೋತು. ಅವು ಹಸ್‌ನ ನೋಡ್ದೊ. ಗುಸು ಗುಸು ಮಾತಾಡಿಕಂಡೊ. ಕರ್‌ಬುಡಿಕೆ ಹೇಳ್ದೊ. ಹಸ್ ಎದ್ದ್‌ನಿತ್ತ್ ಉಚ್ಚೆ ಒಯ್ತ್. ಒಂದೆರ್ಡ್ ಎತ್‌ಗಳೂ ಎದ್ದ್ ನಿತ್ತ್

ಕೊಂಬ್ ಆಡ್ಸಿದೊ. ಹಸ್ಸ್ ತಲೆಯೆತ್ತಿ ಅವ್ವನ ನೋಡ್ತ್. ಕರ್ ಮಾತ್ರ ಈಗ ಆಗ ಹಾಲ್‌ಕುಡೆಕೆ ಬುಟ್ಟವೆತ ಗ್ಯಾನ ಮಾಡಿಕಂಡ್ ಬಾಲನ ಬಡ್ಕ ಬಡ್ಕತ ಬಡ್ಕಂಡ್ ನಿತ್ತಲ್ಲಿ ನಿಲ್ಲದೆ ಎಳ್ದಾಡಿಕಂಡ್ ನಾಲಗೆನ ಹೊರಗೆ ಹಾಕಂಡ್ ಪೇಚಾಡ್ತಿತ್. ಅವ್ವ ಚೊಂಬು ತಕ್ಕಂಡ್ ಬಾತ್. ಕರ್‌ನ ಬುಟ್ಟತ್. ಕರ್ ಕೆಚ್ಚ್‌ಲಿಗೆ ಬಾಯಿ ಹಾಕಿ ಮೂರ್ ನಾಕ್ ದಪ ಗುದ್ದಿತ್. ಮತ್ತೆ ಕರ್‌ನ ಎಳ್ದ್‌ಕಟ್ಟಿತ್. ಅವ್ವ ಹಸ್‌ನ ಕೆಚ್ಚ್‌ಲಿಗೆ ನೀರ್ ಚೇಂಪಿತ್. ಕೆಚ್ಚ್‌ಲ್ ತೊಳ್ದ್ ಹಾಲ್ ಹಿಂಡಿತ್. ಹಾಲ್ ನೊರೆ ನೊರೆಯಾಗಿ ಚೊಂಬು ತುಂಬಿತ್. ಹಂಗೆ ಅವ್ವನ ಕಣ್ಣ್‌ಲಿ ನೀರೂ ತುಂಬಿತ್. ಹಸ್‌ನ ಮುಟ್ಟಿ ನಮಸ್ಕಾರ ಮಾಡಿ ಕಂಬದ ಕರೆಲಿ ಚೊಂಬುನ ಇಸಿ ಕರ್‌ನ ಬುಟ್ಟತ್. ಕೊಟಗೆಂದ ಹೊರಗೆ ಬಂದ್ ನೊರೆ ಹಾಲ್‌ನ ಒಂದ್ ಎಲೆಗೆ ಹೊಯ್ದ್ ಅಂಗಾರನ ಕಲ್ಲಿಗೆ ಇಸಿತ್. ಕೊಟಗೆಂದ ಮನೆಗೆ ಹೋಗುವ ದಾರಿಲಿ ಮಾಮೂಲಿನಂಗೆ ಹಾಲ್‌ಗೆ ಆಸೆ ಮಾಡಿಕಂಡ್ ಕೊತ್ತಿ ಕುದ್ದಿತ್. ಮನೆ ಒಳಗೆ ಹೋದಂಗೆ ಕೊತ್ತಿಗೆ ಒಯ್ಯೊಕು. ಇಲ್ಲರೆ ಅದರ ರಂಪ ತಡೆಕಾದುಲೆ. ಮಕ್ಕ ಮಾತ್ರ ಕುಸು ಕೂಡಿಕಂಡ್ ಕಣ್ಣ್‌ನ ಸೀಟಿಕಂಡ್ ಮೂಲೆಲೇ ಕುದ್ದಿದ್ದೊ.

ಹೊರಗೆ ಅಪ್ಪ ಬಂದವರೊಟ್ಟಿಗೆ ಮಾತಾಡಿಕಂಡ್ ಹಸ್‌ದ್ ಕ್ರಯ ತೀರ್ಮಾನ ಮಾಡ್ತಿದ್ದೊ. ಅಂತೂ ಯಾವುದೋ ಒಂದ್ ಕ್ರಯಕೆ ಒಪ್ಪಂದ ಆತ್. ಅವ್ವ ಕೊಟ್ಟಗೆಗೆ ಹೋಗಿ ಹಸ್‌ನ ಬಿಚ್ಚಿಕಂಡ್ ಬಂದ್ ಅಪ್ಪನ ಕೈಗೆ ಬಳ್ಳಿನ ಕೊಟ್ಟತ್. ಅಪ್ಪ ಕ್ರಮದಂಗೆ ಅವರ ಕೈಗೆ ಹಸ್‌ನೂ ಕರ್‌ನೂ ಒಪ್ಪಿಸಿತ್. ಹಸ್ ಕೊಟಗೆ ಕಡೆ ನೋಡ್ತ್. ಇಷ್ಟ್ ಬೇಗ ನನ್ನ ಮಾತ್ರ ಯಾಕೆ ಮೇಯಕೆ ಬುಟ್ಟದ್‌ತೇಳ್ವ ನೋಟ ಅದರ ಕಣ್ಣ್‌ಲಿತ್ತ್. ಸರಿ, ಬಂದವ್ ಹಸ್‌ದ್ ಬಳ್ಳಿನ ಹಿಡ್ಕಂಡೊ. ಎಳ್ಕಂಡ್ ಹೊರ್ಟೊ. ಕರ್ ಕುಣು ಕುಣುತ ಹಸ್‌ನ ಹಿಂದೆ ನಡ್ತ್.

ಇತ್ತ, ಮನೆಯವ್ ಯಾರೂ ಯಾರೊಟ್ಟಿಗೂ ಮಾತಾಡದೇ ಇಡೀ ಮನೆ ಮೌನ ಆಗಿತ್ತ್. ಕೊತ್ತಿ ಸಾಯಂಕಾಲದ ಹಾಲ್‌ನ ಗ್ಯಾನ ಮಾಡಿಕಂಡ್ ಕುದ್ದಂಗೆ ಜಗಲ್ ಮೂಲೆಲಿ ಕುದ್ದಿತ್. ನಾಯಿಗ ಮಾತ್ರ ಬೊಗ್‌ಳ್‌ದ್ ನಿಲ್ಸಿ ಹಸ್ ಹೋದ ದಾರಿ ಕಡೆ ನೋಡಿಕಂಡ್ ಕುಂಯ್ಗಿಗುಟ್ಟಿಕಂಡ್ ಸಂಕಟಪಡ್ತಿದ್ದೊ.

* * * * *

# ಮಣೆ

ಮಣೆ ಇಲ್ಲದ ಮನೆ ಇಲ್ಲೆತ್ತೇಳುವ ಮಾತುಟ್ಟು. ಹೌದು, ಸೌದೆ ಒಲೆ ಇರುವ ಮನೆಗಳ್ಲಿ ಅಷ್ಟೇ ಅಲ್ಲ, ಬೆಸಗೆ ಇರುವ ಮನೆಗಳ್ಲಿ ಮಣೆ ಉಟ್ಟೇ ಉಟ್ಟು. ಅಂದರೆ ಸೌದೆ ಒಲೆಗೂ ಬೆಸಗೆಗೂ ಮಣೆಗೂ ಒಂದಕ್ಕೊಂದ್ ಸಂಬಂಧ ಉಟ್ಟುತಾತ್.

ಮಳೆಗಾಲಲಿ ಮತ್ತೆ ಸಳಿಗಾಲಲಿ ಅಡ್ಗೆ ಮನೆ ಒಲೆ ಮುಂದೆ ರಶ್ಶೋರಶ್! ಮಣೆಲಿ ಕುದ್ದ್‌ಕಂಡ್ ಕಿಚ್ಚ್ ಕಾಸಿಕಂಬೊದ್ ಎಂತಾ ಸುಕ ಅಲ್ಲ? ಚೆಂಡಿ ಆದ ಬ್ಯಾಗ್ ಮತ್ತೆ ಪುಸ್ತಕಗಳ ಒಣ್ಗಿಸಿಕಂಬೊದು ಆಗಳೆ. ಒಲೆ ಮುಂದೆ ಇಸ್ಕೂಲು ವಿಷಯ, ಊರ್ನ ವಿಷಯ, ಸಂಸಾರದ ಬಾಳ್ ಬದ್ಕ್‌ನ ವಿಷಯ, ಕೆಲ ತೀರ್ಮಾನ ತಕಂಬದ್ದೆಲ್ಲಾ ಎಷ್ಟೋ ಮನೆಗಳ್ಲಿ ಒಲೆ ಮುಂದೆ ಆಗೋತಿತ್ತ್. ಕೆಲ ಸೌದೆಯಂತೂ ನಕ್ಷತ್ರ ಕಡ್ಡಿಯಂಗೆ ಕಿಡಿ ರಟ್ಟಿಸಿ, ರಟ್ಟಿದ ಕಿಡಿಲೂ ಕಿಡಿ ಹುಟ್ಟಿ ಒಲೆ ಮುಂದೆ ಕುದ್ದವರ ಬಟ್ಟೆ ತೂತ ಆದೂ ಉಟ್ಟು. ಮೈಮೇಲೆ ಬಟ್ಟೆ ಹಾಕಂಡಿರಕನೇ ಬಟ್ಟೆ ಸುಟ್ಟರೆ ಮತ್ತೆ ಆ ಬಟ್ಟೆನ ಹಾಕಂಬಕಾಗದ್. ಅದೇ ಬಟ್ಟೆನ ಹಾಕಣದೆ ನಿಮೂರ್ತಿ ಇಲ್ಲದೆ ಹೋದರೆ ಅಂದರೆ ಅನಿವಾರ್ಯತ ಆದರೆ ಆ ತೂತ ಆದ ಬಟ್ಟೆನ ಹಸ್‌ದ್ ಹೊಟ್ಟೆ ಕೆಳಗೆಂದ ದಾಟ್ಸಿ ಮತ್ತೆ ಆ ಬಟ್ಟೆನ ಹಾಕಣಕ್ತೇಳ್ವ ಪದ್ಧತಿ ಉಟ್ಟು.

ಹಿಂಗೆ ಒಲೆ ಮುಂದೆ ಕುದ್ದಿರಕನ ಜೋಳ ಇಲ್ಲರೆ ಹಸ್ನಕ್ಕಿ ಹೊರ್ರೈದೂ ಉಟ್ಟು. ಅದ್ ಲಬ್‌ಡಬ್‌ತ ಸಿಡೆಕನ ಕುದ್ದವರ ಆ ನಗೆ, ಆ ಕುಸಿನ ಈಗ ಗ್ಯಾನ ಮಾಡ್ದೇ ಒಂದ್ ಕುಸಿ. ಹಸ್ನಕ್ಕಿ ಹೊರ್ದ್ ನೆಲಕೆ ಸೊರ್ದ್ ಅದರ ಮೇಲೆ ಗರ್‌ಬರ್‌ತ ಉಜ್ಜಿಕೆ ಮಣೆ ಬೇಕು. ಹುಟ್ಟಿಕೆ ಹಾಕಿಕೆತ ಉಂಡೆ ಸಂಬಾರನ ಬೇಳೆ ಮಾಡಿಕೂ

ಮಣೆ ಬೇಕಾದೆ. ಉಂಬಕೆ ಕೂರಕನಂತೂ ಅವರವರ ಕುಸಿನ ಮಣೆನೇ ಆಕು. ವ್ಯತ್ಯಾಸ ಆತೋ ಜಟಾಪಟಿ ಸುರಾಬುಡ್ತಿತ್ತ್.

ಕೆಲವು ಮನೆಗಳ ಮಣೆಗಂತೂ ತರಿಕುಂಟೆ ಆಬುಡ್ತಿತ್ತ್. ಆ ಮಣೆಗೆ ಆಚೆ ಕಡ್ದ್ ಈಚೆ ಕಡ್ದ್ ಕುತ್ತಿಗೆನಂಗೆ ಸಣ್ಣ ಆತಿತ್.

ಕೆಲ ನಂಟ್ರ್ ಬಂದರೆ ಅವ್ಕೆ ತಲೆ ದಿಂಬು ಕೊಟ್ಟ್ ಮಲ್ಗುಸುದೇ ಕಷ್ಟ. ಇನ್ನೊಂದ್ ದಿಂಬು ಇದ್ದರೆ ಕೊಡಿ. ಇದ್ ಎತ್ತರ ಸಾಲ್ದ್‌ತ್ತೇಳ್ತಿದ್ದೊ. ಆಗ ಹಾಸಿಗೆ ಕೆಳಗೆ ಮಣೆ ಅದರ ಮೇಲೆ ದಿಂಬು ಮಡ್ಕಂಡ್ ಮಲ್ಗಿದರ ನೋಡಿರೆ ಇವು ಕಾಲ್ ನೀಂಡಿ ಕುದ್ದದೋ ಕಾಲ್ ನೀಂಡಿ ಮಲ್ಗಿದೋತ ಗೊತ್ತಾತಿತ್ಲೆ.

ಮನೆಲಿ ದೊಡ್ಡವು ಇಲ್ಲದಿರಕನ ಕೆಲ ಮಕ್ಕ ಬೆಸಗೆಲಿದ್ದ ಬೆಲ್ಲನೊ ಮತ್ತೊಂದನೊ ತೆಗೆಕೆ, ಇಲ್ಲರೆ ನೆಲುಲಿರುವ ಬೆಣ್ಣೆ ತೆಗ್ದ್ ತಿಂಬಕೆ ಮಣೆಗಳ ಜೋಡ್ಸಿ ಅದರ ಮೇಲೆ ಹತ್ತಿ ತೆಗ್ದ್ ತಿಂಬತ್ತಿದ್ದೊ. ಪಾಲ್ ಕಮ್ಮಿ ಆದ ಮಕ್ಕ ಅವ್ವ ಬಂದಂಗೆ ಪುಕಾರ್ ಕೊಟ್ಟ್ ಪೆಟ್ಟೊ ತಿಂಬತ್ತಿದ್ದೊ.

ಪೂಜೆ ಮಾಡಕನ ಪೂಜಾರಿ ಕೂರಿಕೆ, ದೀಪ ಇಸಿಕೆ, ಮೊದುವೆಲಿ ಎಣ್ಣೆ ಅರಸಿನ ಶಾಸ್ತ್ರ ಮಾಡಿಕೂ ಮಣೆ ಬೇಕು.

ಕೂಸುನ ಮೀಸವು ಮಣೆ ಮೇಲೆ ಕಾಲ್ ನೀಂಡಿ ಕುದ್ದ್ ಕೂಸುನ ಕಾಲ್ ಮೇಲೆ ಮಲ್ಗಿಸಿಕಂಡ್ ಮೀಸಿವೆ. ಬಾಣಂತಿನ ಮೀಸಕನಂತೂ ಅವುಳ್‌ನ ಮಣೆ ಮೇಲೆ ನಿಲ್ಸಿಕಂಡ್ ಮೀಸಿವೆ. ಬರೀ ನೆಲಲಿ ಬಾಣಂತಿ ನಿತ್ತರೆ ಮೀದಾಕನ ಪಾದಕ್ಕೆ ಶೀತ ಹತ್ತಿ ಚೆನ್ನಿ ಆ ಬುಡ್ದುತ ಎಚ್ಚರ ತಕಂಡವೆ.

ಇನ್ನ್ ಕೆಲ ಬೇಟೆಗಾರರ್‌ಗೆ ಬೇಟೆ ಆದುಲೆ. ಕೋವಿಗೆ ಮುಟ್ಟಿ ಆಗಿರೊಕುತ್ತೇಳಿ ಮುಟ್ಟಿ ತೆಗೆವನ ಕರ್ಸಿ ತೆಗ್‌ಸ್ತಿದ್ದೊ. ಆಗ ಕೈಯಾಲೆಲಿ ಮಣೆ ಇಸಿ ಮಣೆ ಮೇಲೆ ಕೊಡಿ ಬಾಳೆಲೆಗೆ ಒಂದೆರ್ಡ್ ಸೇರ್ ಅಕ್ಕಿ ಸೊರ್ಗ್ತಿದ್ದೊ. ಆ ಅಕ್ಕಿ ಮೇಲೆ ಒಂದ್ ಮೊಟ್ಟೆನ ಕುತ್ತ ನಿಲ್ಸಿ ಆ ಮೊಟ್ಟೆಗೆ ದೂರಂದ ಕೋವಿಂದ ಗುರಿ ಹಿಡ್ದ್ ಮುಟ್ಟಿ ತೆಗೆವ ಪದ್ಧತಿ ಇತ್ತ್. ಇಂದ್ ಕೋವಿ ಮೂಲೆಲಿ ಕುದ್ದುಟು. ಹಂಗಾಗಿ ಕೋವಿಗೆ ಮುಟ್ಟಿಯಿಲ್ಲೆ. ಕೈ ಕಟ್ಟಿ ಕುದ್ದ ಬೇಟೆಗಾರಂಗೂ ಮುಟ್ಟಿ ಹಕ್ಕಲೆ ಹಣೆಕಿಲೆ.

ಹೆಣ್ಣ್‌ಮಕ್ಕ ಆಟ ಆಡಕನ ಮಣೆನ ಕೂಸುತ್ತೇಳಿಕಂಡ್ ಅದರ ಮೀಸಿ ಅದ್ಕೆ ಬೊಟ್ಟು ಹಾಕಿ, ಬಟ್ಟೆ ಸುತ್ತಿ ಸೊಂಟಲಿ ಕೂರ್ಸಿಕಂಡ್ ಆಟ ಆಡ್ತಿದ್ದೊ. ಲಗ್ಗೆ

ಆಡುವ ಚೆಂಡಾಟದ ಮಕ್ಕ ಲಗ್ಗೆ ಆಗಿ ನಿಲ್ಸಿಕೆ ಪಾರ್ ಇಲ್ಲದಿದ್ದರೆ ಮಣೆನೇ ಗತಿ. ಅದ್ಕೆ ದೂರಂದ ಚೆಂಡ್ ಹೊಡ್ದ್ ಆಟ ಆಡ್ತಿದ್ದೊ. ಬರ್ಜಿಯೊಳಗೆ ಕೋಳಿನ ಮುಚ್ಚಿ ಮೇಲೆ ಭಾರ ಇಸಿಕೂ ಮಣೆ ಬೇಕ್. ಇನ್ನ್ ತಲೆ ಬಾಚಕನ ಅಯ್ಯೆ ಮಗಳ್‌ನ ಮಣೆಲಿ ಕೂರ್‌ಸಿಕಂಡ್ ಕತೆ ಹೇಳಿಕಂಡೊ, ಪದ ಹೇಳಿಕಂಡೊ ಕುದೊಲು ಚಿಕ್ಕ್ ಬುಡ್ಸಿಕಂಡ್, ಬಾಚಿಕಂಡ್ ಜಡೆ ಹಾಕಿದ ಮೇಲೆ ಉದ್ದ ಬಾ, ಉದ್ದುದ್ದ ಬಾತ ಹೇಳಿಕಂಡ್ ಜಡೆ ಬುಡಂದ ತುದಿ ಮುಟ್ಟ ಮೆಲ್ಲ ಮೆಲ್ಲ ಗುದ್ದುತಿದ್ದ ಕಾಲ ಹಿಂದೆ ಇತ್ತ್. ಕೆಲ ಸತಿ ಅಡ್ಗೆ ಮನೆ 'ವಾರ್ ರೂಂ' ಆಗಿ ಗಂಡ ಹೆಣ್ಣ್ ಮಣೆನ ಆಯುಧ ಮಾಡ್ಕಂಬತಿದ್ದೊ!

ಮಣೆ ಪವಿತ್ರವಾದ ವಸ್ತು. ಮಣೆಯೊಟ್ಟಿಗೆ ಮುಕ್ಕಾಲ್‌ನೂ ಮರೆವಿಂಗಿಲ್ಲೆ. ಯಾರೂ ಸನ ಮಣೆ ಮೇಲೆ ಮಣೆ ಇಸಿಕಂಡ್ ಕೂರಿಕಾಗದ್‌ತ್ತೇಳುವ ನಿಯಮನೂ ಉಟ್ಟು.

'ಹಾಕ್ ಮಣೆ, ನೂಕು ಮಣೆ, ತೋರು ಮಣೆ'ತ್ತೇಳುವ ಮಾತ್‌ಲಿ ಮಣೆದ್ ಮಹತ್ವ ಅಡಂಗಿಟ್ಟುತ್ತೇಳ್ದರ ಯಾರೂ ಮರೆದುಲೆ.

* * * * *

# ಲೈಸನ್ಸ್ ಇದ್ದವ್ಕೆ ಮಾತ್ರ ರೇಡಿಯೋ

ಊರೊಳಗೆ ರೇಡಿಯೋ ಎಲ್ಲೊ ಒಂದೆರ್ಡ್ ಇದ್ದ ಕಾಲ ಅದ್. ಟಿ.ವಿ.ತ ಹೇಳ್ರೆ ಎಂತತೇ ಗೊತ್ತಿತ್ಲೆ. ಹಿಂಗಿರಕನ ಹಳ್ಳಿ ಜನಕೆ ಮನರಂಜನೆ ಸಿಕ್ಕಿಕೆ ಹೆಂಗೆ ಸಾಧ್ಯ ಹೇಳಿ! ಬರೀ ಕೆಲ್ಸ ಕೆಲ್ಸ ಕೆಲ್ಸ. ಎಲ್ಲಾರ್ ಮೊದುವೆ ಜಂಬರ ಇರಕನ ಕೊಂಬು ವಾಲಗ ಇರ್ತಿತ್. ಕೆಲವ್ ಕೊಣೆತಿದ್ದೊ. ಮಕ್ಕ ಮರಿ ನೋಡಿ ಕುಸಿ ಪಡ್ತಿದ್ದೊ. ಮೊದುವೆ ಆದ ನಾಕಾರ್ ದಿನ ಕಳ್ದ್ 'ಟೀ ಪಾರ್ಟಿ'ತ ಕೆಲವ್ ಮಾಡ್ತಿದ್ದೊ. ಆಗ ಗ್ರಾಮಾಫೋನ್ ಇರ್ತಿತ್. ಅದರ್ಂದ ಪದ ಕೇಳಿ ಕುಸಿ ಪಡ್ತಿದ್ದೊ. ಅದ್ ಬುಟ್ಟರೆ ಕೆಲ ಹಳ್ಳಿ ಜನಕೆ ಯಕ್ಷಗಾನ, ನಾಟಕ, ಹರಿಕಥೆ ಇದ್ ಯಾವ್ದೂ ಗೊತ್ತಿತ್ಲೆ. ಇಸ್ಕೂಲಿಗೆ ಹೋಗುವ ಮಕ್ಕ ಇದ್ದರೆ ಮಾತ್ರ ಇಸ್ಕೂಲಿಗೆ ಹರಿಕಥೆ ದಾಸರ್ ಬಂದಿದ್ದೊ, ಕಥೆ ಹೇಳ್ದೊ, ಇನ್ನೊಮ್ಮೆ ದೊಂಬರಾಟದವ್ ಬಂದ್ ಆಟ ತೋರ್ಸಿದೊತ ಹೇಳ್ತಿದ್ದೊ. ಆಗ ಇಸ್ಕೂಲ್‌ಗ ಇದ್ದದೂ ಕಮ್ಮಿ. ಇಸ್ಕೂಲಿದ್ದರೂ ಮಕ್ಕ ಹೋತಿದ್ದದೂ ಕಮ್ಮಿ. ಕುಗ್ರಾಮ ಕುಗ್ರಾಮನೇ ಆಗಿತ್ತ್. ಹಳ್ಳಿಗೆ ಕಾಲ್‌ದಾರಿ ಬುಟ್ರೆ ರಸ್ತೆ ಇತ್ಲೆ. ರಸ್ತೆ ಇಲ್ಲದ ಮೇಲೆ ವಾಹನಗ ಓಡಾಡ್ದು ಹೆಂಗೆ? ಹಂಗಾಗಿ ಹಳ್ಳಿ ಜನಗ ಪೇಟೆ ಪಟ್ಟಣತ ಓಡಾಡ್ತಿದ್ದದೇ ಕಮ್ಮಿ. ಅದಲ್ಲೂ ಕೆಲ ಹೆಣ್ಮಕ್ಕಂತೂ ವಾಹನ ಹತ್ತಿದವಲ್ಲ, ಪೇಟೆ ಸುತ್ತಿದವಲ್ಲ. ಸೂಜಿ ಮದ್ದ್ ಕುತ್ಸಿಕಂಡವಲ್ಲ, ಪಿಲ್ಸ್ ನುಂಗಿದವಲ್ಲ. ಎಲ್ಲಕ್ಕೂ ಮುಖ್ಯ ಕಾಯ್ಲ ಬಿದ್ದವಲ್ಲ!

ಕೆಲವ್ ಪೇಟೆಗಳ್‌ಲಿ ಸಿನೆಮಾ ಮಂದಿರ ಇತ್ತ್. ಅಲ್ಲಿಗೆ ಯಾವ ಸಿನೆಮಾ ಬಂದುಟ್ಟುತ ಗೊತ್ತಾದು ಹೆಂಗೆ? ಸೈಕಲ್‌ಗೆ ತಟ್ಟಿ ಕಟ್ಟಿ, ಆ ತಟ್ಟಿಗೆ ಸಿನೆಮಾದ ಪೋಸ್ಟರ್‌ನ ಅಂಟ್‌ಸ್‌ತಿದ್ದೊ. ಸೈಕಲ್ ಚಕ್ರಕ್ಕೆ ಬಲೂನ್‌ನ ಕಟ್ಟ್‌ತಿದ್ದೊ. ಸೈಕಲ್ ಮೆಟ್ಟಕನ ಬಲೂನ್ ಟರ್ರ್ರೋತ ಸದ್ದ್ ಮಾಡ್ತಿತ್ತ್. ಆ ಸದ್ದ್‌ಗೆ ಮಕ್ಕ ಮರಿ ರಸ್ತೆ ಕಡೆ ಓಡಿ ಬಾತಿದ್ದೊ. ಸೈಕಲ್‌ಗೆ ಕಟ್ಟಿದ ತಟ್ಟಿ ನೋಡಿ ಪಿಚ್ಚರ್ ಹೆಸ್ರ್ ತಿಳ್ಕಂಬತ್ತಿದ್ದೊ.

ಪಿಚ್ಚರ್ ನೋಡಿಕೆ ಹೋತಿದ್ದೊ ಬುಡ್ತಿದ್ದೊ ಅದ್ ಬೇರೆ ವಿಚಾರ. ಮತ್ತೆ ಮತ್ತೆ ಸೈಕಲ್ ಬದ್‌ಲ್‌ಗೆ ಕಾರ್‌ಗಳ್‌ಲಿ ಪ್ರಚಾರ ಸುರಾತ್. ಕಾರ್‌ಗೆ ಧ್ವನಿವರ್ಧಕನ ಕಟ್ಟಿಕಂಡ್ ಪ್ರಚಾರ ಮಾಡ್ತಿದ್ದೊ. ಪಿಚ್ಚರ್ ವಿಚಾರನ ಕಾಗದಲಿ ಪ್ರಿಂಟ್ ಮಾಡಿ ಅಂಗ್ಡಿ, ಹೋಟೆಲ್ ಮುಂದೆಲ್ಲಾ ಆ ಕಾಗದನ ಬಿಸಾಡ್‌ತಿದ್ದೊ. ಜನಗ ಅದರ್ನ ಹೆರ್‍ಕಿಕಂಬತಿದ್ದೊ. ಕೆಲವ್ ಕಡೆ ಗೋಡೆಗಳ್‌ಗೆ ಪೋಸ್ಟರ್‌ನ ಅಂಟ್‌ಸ್‌ತ್ತಿದ್ದೊ. ಬಾಯಿಂದ ಬಾಯಿಗೆ ವಿಚಾರ ಪ್ರಚಾರ ಆತಿತ್. ಪೇಟೆ ಪಟ್ಟಣ ನೋಡ್ತಿದ್ದ ಹಳ್ಳಿಯವ್ ವರ್ಷಲಿ ಒಂದೆರ್‍ಡ್ ದಪ ನಡ್ದೇ ಹೋಗಿ ಪಿಚ್ಚರ್ ನೋಡ್ತಿದ್ದೊ.

ಒಮ್ಮೆ ಒಂದ್ ಸಣ್ಣ ಹೈದ ನೆರೆಮನೆಯವನೊಟ್ಟಿಗೆ ಪಿಚ್ಚರ್ ನೋಡಿಕೆ ಹೋತ್‌ಗಡ. ಎಷ್ಟೋ ದೂರ ನಡ್ದ್ ಮತ್ತೆ ಲಾರಿ ಹತ್ತಿ ಇಬ್ಬರು ಪೇಟೆಗೆ ಹೋದೊ. ರಾತ್ರೆ ಹೊತ್ತ್‌ಲಿ ಈ ಹೈದ ಪೇಟೆ ನೋಡ್ದಂವನೇ ಅಲ್ಲ. ಅದೇ ಸುರೂಸತಿ. ಸೂಟೆ ಹೋಸಿಕಂಡ್ ರಾತ್ರೆ ಅಪ್ಪನೊಟ್ಟಿಗೆ ಗದ್ದೆಗೆ ಹೋತಿದ್ದ ಹೈದ ಅಂವ. ಅಂತವ ಪೇಟೆಗೆ ಹೋದರೆ ಹೆಂಗಾದು? ಕರೆಂಟ್ ಬೆಳ್ಕ್‌ಲಿ ಪೇಟೆ ಝುಗಮಗ ಹೇಳ್ತಾ ಉಟ್ಟು. ಹೆಡ್‌ಲೈಟ್ ಬುಟ್ಟ್‌ಕಂಡ್ ವಾಹನಗ ಅತ್ತಿತ್ತ ಓಡಾಡ್ತ ಒಳೊ. ಈ ಹೈದಂಗೆ ಹೆಂಗೆಂಗೋ ಆತ್. ಹಳ್ಳಿಯಂವ ಒಬ್ಬ ಸುರೂಸತಿ ಮೈಸೂರ್ ಅರಮನೆಗೆ ವಿದ್ಯುತ್ ದೀಪದ ಅಲಂಕಾರ ಮಾಡ್ದರ ನೋಡ್ತ್‌ಗಡ. ಹಾ! ಬೆದ್ರ್ ಹಿಂಡ್ಲ್‌ಗೆ ಬೆಂಕಿ ಬಿದ್ದಂಗೆ ಕಾಂಬತಿತ್ತ್‌ತ ಮನೆಗೆ ಹೋಗಿ ವರ್ಣನೆ ಮಾಡ್ತ್‌ಗಡ. ಹಂಗೆ ಪಿಚ್ಚರ್ ನೋಡಿಕೆ ಪಟ್ಟಣಕ್ಕೆ ಬಂದ ಈ ಹೈದನ ಸ್ಥಿತಿ ನೋಡಿ:

ಸರಿ, ಟಿಕೆಟ್ ತಕ್ಕಂಡ್ ಪಿಚ್ಚರ್ ಥಿಯೇಟರ್ ಒಳಗೆ ಹೋದೊ. ಅದ್ ದೊಡ್ಡ ಹಾಲ್. ಹಿಂದೆ ಹಿಂದೆ ಮೆಟ್ಟ್ ಮೆಟ್ಟ್ ಮಾಡಿ ಕುರ್ಚಿ ಜೋಡ್ಸಿದ್ದೊ. ತಲೆ ಎತ್ತಿ ನೋಡಿರೆ ತಲೆ ಕೊಡಿಲಿ ಕರೆಂಟ್ ಬೆಳ್ಕ್ ಬೆಳ್ಗ್‌ತಿತ್. ಗದ್ದೆ ಪಾರಕ್ಕೆ ಅಟ್ಟಪಾಳಿಲಿ ಮಲ್ಕಂಡ್ ನಕ್ಷತ್ರ ನೋಡ್ದ ಗ್ಯಾನ ಆತ್. ಥಿಯೇಟರ್ ಒಳಗೆ ಯಾರ್‍ಯಾರೋ ಕುದ್ದೊಳೊ. ಯಾರ್‍ನೂ ಗೊತ್ತೇ ಇಲ್ಲೆ. ಈ ಇಬ್ಬರು ನಡೂ ಸಾಲ್‌ಲಿ ಕುದ್ದೊ. ಆದರೆ ಈ ಹೈದಂಗೆ ಸುರೂನ ಸಾಲ್‌ಲಿ ಕೂರೊಕುತ ಆಸೆ. ಯಾಕೆಂತೇಳ್ರೆ ಹಿಂದೆ ಕುದ್ದರೆ ಲಾಯ್ಕ ಕಾಂಬಕಿಲೆ, ಹಂಗಾಗಿ ಸುರೂ ಸಾಲ್‌ಲೆ ಕೂರಕಾಗಿತ್‌ತ ಪೇಚಾಡಿಕಂಡತ್. ಕುದ್ದ ಜನಗ ಸುಮ್ಮನೆ ಇತ್ಲೆ. ಗಲ ಗಲ ಸದ್ದ್ ಮಾಡ್ತಿದ್ದೊ. ಕೆಡ್ಸಿದ ಬೆಂಕಿಕೊಳ್ಳಿಂದ ಹೊಗೆ ಎದ್ದದಲ್ಲಾ ಹಂಗೆ ಸುತ್ತ ಮುತ್ತೆಲ್ಲಾ ಹೊಗೆ. ಬೀಡಿ ಸೇದಿ ಸೇದಿ ಹೊಗೆ ಬುಡ್ತಾ ಇದ್ದೊ. ಕೆಮ್ಮವ್ ಕೆಮ್ಮಿಕಂಡ್ ಕುದ್ದಿದ್ದೊ. ಆಗ ಒಳಗೆ

ಮೆಲ್ಲ ಮೆಲ್ಲ ಕತ್ತಲಾತ್. ಸ್ಕ್ರೀನ್‌ಲಿ ಪಿಚ್ಚರ್ ಮೂಡಿಬಾತ್. ಅದ್ರೊಟ್ಟಿಗೆ ದಪ್ಪ ದೊನಿಲಿ ಮಾತ್ ಸುರಾತ್. ನಟರ್ ಸ್ಟೈಲಾಗಿ ಓಡಾಡ್ದು, ಬೈಕ್‌ಲಿ ಹೋದು, ಕಾರ್‌ಲಿ ಬಾದು, ಹಾಡ್, ಡ್ಯಾನ್ಸ್, ಹೊಡ್ದಾಟ ಬಡ್ದಾಟ ಆಕಂಡಿರಕನ ಪೋಲೀಸ್‌ಗ ಬಂದ್ ಒಂದಿಬ್ಬರ್ನ ಎಳ್ಕಂಡ್ ಹೋದು ಹಿಂಗೆ ಎಂತೆಂತದೋ ತೋರ್‌ಸ್ತಾ ಇದ್ದೊ. ಹಿಂಗಿರಕನ ಪಿಚ್ಚರ್ ಟಪ್ಪಂತ ನಿತ್ತೋತು. ಆಗ ನೋಡೊಕು, ಜನ ಬೊಬ್ಬೆ ಹೊಡ್ದೊ, ಸೀಪುಳು ಹಾಕಿದೊ. ಅಷ್ಟೊತ್ತಿಗೆ ಕರೆಂಟೂ ಬಾತ್. ಪಿಚ್ಚರ್ ಮುಂದೊರ್ತ್. ಸುಮಾರ್ ಹೊತ್ತ್ ಆದ ಮೇಲೆ 'ವಿರಾಮ'ನೋ, ಮಧ್ಯಂತರನೋ ಏನೋ ಬಂದಿರೊಕು. ಇಡೀ ಥಿಯಟರ್ ಬೆಳ್ಗಿತ್. ಜನ ಎದ್ದ್ ಆಚೆ ಈಚೆ ಹೋಗಿ ಬಂದೊ. ಮತ್ತೆ ಪುನಾ ಇಡೀ ಥಿಯೆಟರ್ ಹೊಗೆಂದ ತುಂಬಿ ಹೋತು. ಅಷ್ಟೊತ್ತಿಗೆ ಎಂತೆಂತದರ್ನೋ ಮಾರಿಕಂಡ್ ಬಂದೊ. ಈ ಇಬ್ಬರು ಹೊದ್ರಿನೊ, ಹೊರ್‌ಕುಲ್‌ನೋ ತಕಂಡ್ ತಿಂದೊ. ಅಲ್ಲೆಲ್ಲಾ ಕಸದ ಗುಡ್ಡೆ ಬೀತ್. ಈ ಹೈದನ ಗ್ಯಾನ ಮನೆಕಡೆಗೆ ಹೊರಳ್‌ತ್. ಈ ಥಿಯೆಟರ್ ನವ್ ಊಟ ಎಷ್ಟೊತ್ತಿಗೆ ಕೊಟ್ಟವೆ? ಎಲ್ಲಿ ಮಲ್ಗಿಕೆ ಹೇಳಿವೆತೆಲ್ಲಾ ಗ್ಯಾನ ಮಾಡಿಕಂಡ್ ಪಿಚ್ಚರ್ ನೋಡ್ತಿತ್. ಹಂಗೂ ಹಿಂಗೂ ಪಿಚ್ಚರ್ ಬುಟ್ಟತ್. ಜನಗೆಲ್ಲಾ ಹೊರಗೆ ಹೋದೊ. ಹೊರಗೆ ಹೋದವ್ ಗೇಟ್‌ದಾಟಿ ಹೋಗೇ ಬುಟ್ಟೊ. ನೀರ್ ಇಳ್ದಂಗೆ ಜನಗ ಕಾಲಿ ಆದೊ. ಹೊತ್ತ್ ಎಷ್ಟಾಗಿರ್ದು? ಎಷ್ಟ್? ನಡೂ ಇರ್‍ಲ್! ಅಲ್ಲಿ ನರಪಿಳ್ಳೆ ಇಲ್ಲೆ. ಥಿಯೆಟರವು ಬಾಗ್ಲ್ ಹಾಕಂಡೊ. ಅರೆ! ಊಟನೂ ಇಲ್ಲೆ. ಮಲ್ಗಿಕೆ ಹೇಳ್ತೂ ಇಲ್ಲೆ. ಈ ಹೈದ ಕರ್‍ಕೋಂಡೋದವನೊಟ್ಟಿಗೆ "ಅಣ್ಣಾ ಕಥೆ ಯಂತಾತ?" ಕೇಳ್ತ್. ಕತೆ ಎಂಥನೂ ಇಲ್ಲೆ. ಇಷ್ಟೊತ್ತ್ ಕುದ್ದ್ ನೋಡ್ದೇ ಕಥೆತ ಹೇಳ್ತ್. "ಅಣ್ಣಾ, ಊಟ?" ಊಟ ಇನ್ನ್ ಮನೆಲಿ. ಈ ರಾತ್ರೆ ಇಲ್ಲಿ ಊಟ ಕೊಡವ್ ಯಾರೂ ಇಲ್ಲೆ. "ಅಣ್ಣಾ ಮಲ್ಕಂಬೊದು ಎಲ್ಲಿ?" ಇಲ್ಲೇ ಎಲ್ಲಾರ್ ಬಸ್‌ಸ್ಟ್ಯಾಂಡ್‌ಲಿ. "ಚಾಪೆ, ಹಾಸಿಗೆ, ಬೆರ್‌ಸಿಟ್?" ಅದೆಲ್ಲಾ ಮನೆಲಿ. ಹಿಂಗೆ ಕಡ್ಡಿ ಮುರ್ದಂಗೆ ಅಂವ ಹೇಳ್ತ್. ಹಿಂಗೆ ಗುಣು ಗುಣು ಮಾತಾಡಿಕಂಡ್ ಬಸ್‌ಸ್ಟ್ಯಾಂಡಿಗೆ ಹೋದೊ. ಜನಗ ಯಾರೂ ಇಲ್ಲದ ರಸ್ತೆ, ಹೊತ್ತಿಕಂಡಿದ್ದ ಕರೆಂಟ್ ಬಲ್ಬ್‌ಗೆ ಎಂತೆಂತದೊ ರೆಕ್ಕೆ ಹುಳಗ ಮುತ್ತಿಕಂಡ್ ಹಾರ್ತಿದ್ದೊ. ವಾಹನಗಳ ಓಡಾಟ ಇಲ್ಲೆ. ಜನರ ಗಲಿಬಿಲಿ ಇಲ್ಲದ ಪೇಟೆ ಪೂರ ಮೌನ ಆಗಿತ್ತ್. ಒಂದ್ ಕಡೆ ನಾಯಿಗ ಸುರುಟಿ ಮಲ್ಗಿದ್ದೊ. ಒಂದೆರ್ಡ್ ದನಗ ಒತ್ತೊತ್ತಾಗಿ ಮಲ್ಗಿ ನಿದ್ದೆ ಮಾಡ್ತಿದ್ದೊ.

ಪಿಚ್ಚರ್ ನೋಡಿಕೆ ಹೋದ ಹೈದಂಗ ಬೆಳಗ ಮಾಡಿಕೆತ ಬಸ್‌ಸ್ಟ್ಯಾಂಡಿಗೆ ಹೋದ ಮುಂದೆನ ಕಥೆ ಕೇಳಿ : ಆ ಇಬ್ಬರ್‌ಲಿ ಒಬ್ಬ ಸಣ್ಣ ಹೈದ. ಮೂರನೆಯೋ

ನಾಕನೆಯೋ ಓದುತ್ತಿದ್ದಂವ. ಆ ಇನ್ನೊಬ್ಬ ಇಂವಂಗಿಂತ ಹತ್ತ್ ಹದ್ನೈದ್ ವರ್ಷಕೆ ದೊಡ್ಡಂವ. ಇಸ್ಕೂಲ್ ಮೊಕ ಕಂಡಂವ ಅಲ್ಲ. ಆದರೆ ಅಲ್ಲಿ ಇಲ್ಲಿ ಸುತ್ತಿದ ಅನುಭವಿ. ಸರಿ, ಇವು ಪಿಚ್ಚರ್ ನೋಡಿಕಂಡ್ ಮನೆಗೆ ಹೋಗದೆ ಬಸ್‌ಸ್ಟ್ಯಾಂಡಿಗೆ ಹೋದೊ. ಮನೆಗೆ ಯಾಕೆ ಹೋತ್ಲೆತೇಳ್ರೆ ಅವ್ರ ಮನೆ ಇರ್ದು ಹತ್ತಿಪ್ಪತ್ ಮೈಲ್ ದೂರಲಿ. ಅದೋ ಕಾಡ್ ದಾರಿ. ಆನೆಗ ಹುಲಿಗ ಇರುವ ಕಾಡ್ ಅದ್. ಇಂವ ಬೇರೆ ಸಣ್ಣ ಹೈದ. ದಾರಿಗೆ ಬೆಳ್ಕ್‌ನ ವ್ಯವಸ್ಥೆನೂ ಇಲ್ಲೆ. ಹೆಂಗೂ ಬಸ್‌ಸ್ಟ್ಯಾಂಡ್ ಉಟ್ಟು. ಅಲ್ಲೆ ಕುದ್ದ್ ಬೆಳಗ ಮಾಡಿ ಲಾರಿಗೀರಿಲಿ ಹೋಗಿ ಮತ್ತೆ ಐದಾರ್ ಮೈಲಿ ನಡೆದು ಕಷ್ಟ ಆಕಿಲೆತ ಅವು ಬೆಳಗ ಮಾಡಿಕೆ ಸ್ಟ್ಯಾಂಡ್ ಕಡೆ ಹೋದೊ.

ಅಲ್ಲಿ ಸ್ಟ್ಯಾಂಡ್ ಹೊರಗೆ ಒಂದ್ ಕಡೆ ನಾಯಿಗ ಸುರುಟಿ ಮಲ್ಗಿದ್ದೊ. ಓ ಅಷ್ಟ್ ದೂರಲಿ ದನಗ ಒತ್ತೊತ್ತಾಗಿ ಮಲ್ಗಿದ್ದೊ. ಸ್ಟ್ಯಾಂಡ್ ಒಳಗೆ ಒಬ್ಬ ಗೋಡೆ ಕಡೆ ಮೊಕ ಮಾಡಿ ಮಾಸ್‌ಲ್ ಪಂಚೆನ ಗುಡಿ ಹೊದ್ದ್‌ಕಂಡ್ ಕೊಕ್ಕೆಯಾಗಿ ಮಲ್ಗಿತ್ತ್. ತಲೆ ಕಡೆ ಹೊಟ್ಟಿಕಂಡಿದ್ದ ಒಂದ್ ಅಲ್ಯುಮಿನಿಯಂ ಬಟ್ಲ್ ಇತ್ತ್. ಗೋಡೆ ಕರೆಲಿ ಒಂದ್ ದೊಣ್ಣೆ ಇತ್ತ್. ಅಂವ ಭಿಕ್ಷುಕ ಇರೊಕುತ ಅಂದಾಜಾತ್. ನಾಯಿಗಳಿಗಾಗಲಿ, ದನಗಳಿಗಾಗಲಿ, ಆ ಮನುಷ್ಯಂಗಾಗಲಿ ಯಾವ ಗೋಚರ ಇತ್ಲೆ.

ಇವು ಹೋದವ್ ಸ್ಟ್ಯಾಂಡ್ ಒಳಗೆ ತಿಂಟೆಲಿ ಕುದ್ದೊ. ಹಗ್ಲ್ ಅದೇ ತಿಂಟೆಲಿ ಎಷ್ಟ್ ಜನ ಕುದ್ದಿರಿಕಿಲೆ? ಶ್ರೀಮಂತ ಬಡವತ ಬಸ್‌ಸ್ಟ್ಯಾಂಡಿಗೆ ಉಟ್ಟ? ಯಾರೂ ಬರಕ್, ಯಾರೂ ಹೋಕ್. ಹೆಂಗಿದ್ದರೂ ಅದ್ ಸಾರ್ವಜನಿಕ ಸೊತ್ತು. ಅದ್ ಸರಿ, ಈ ಹೈದಂಗ ಒಳಗೆ ಮೂಲೆಲಿ ಮುದ್ದೆಯಾಗಿ ಕುದ್ದೊ. ಸಣ್ಣದಾಗಿ ಗಾಳಿ ಬೀಸಕನ ಕೋಟ ಸುರಾತ್. ಬಾಗ್ಲ್ ಹಾಕೊನೊತೇಳ್ರೆ ಬಸ್‌ಸ್ಟ್ಯಾಂಡ್‌ಗೆ ಬಾಗ್ಲ್ ಇದ್ದದೆಯಾ? ತಿಂಟೆನ ಮುಟ್ಟಿರೆ ತಿಂಟೆ ಪೂರಾ ಕೋಟ. ಗೋಡೆನ ಮುಟ್ಟಿರೆ ಗೋಡೆನೂ ಕೋಟ. ಮೈಗೆ ಸುತ್ತಿಕಂಬಕೆ ಎಂತನೂ ಇಲ್ಲೆ. ದೊಡ್ಡ ಹೈದ ಸುರಾಲ್ ಹಾಕಂಡಿತ್ತ್. ಈ ಪಡ್ಡೆ ಚಡ್ಡಿ ಹಾಕಂಡಿತ್ತ್. ಪಾದ, ಮಂಡಿ, ಕೆಮಿ, ಮೂಕು ತುದಿಗೆ ಕೋಟ ಹತ್ತಿತ್. ಇವು ಕುದ್ದ ಜಾಗೆ ಇವ್ರ ಮೈ ಬಿಸಿಂದ ಹಂಞ ಬೆಚ್ಚಂಗಾತ್. ಆದರೆ ಆಚೆ ಈಚೆ ಮುಟ್ಟಿರೆ ಅಯ್ಯಪ್ಪಾ ಕೋಟಾ ಕೋಟ. ಉದ್ದೋಕೆ ಮಲ್ಗಿರೆ ಮರಗಟ್ಟಿ ಸಾಯವೊ. ಕುದ್ದೇ ಬೆಳಗ ಮಾಡೊಕು. ಕೋಳಿಗ, ಹಕ್ಕಿಗೆಲ್ಲ ಕುದ್ದೇ ಬೆಳಗ ಮಾಡಿವೆ. ರೆಕ್ಕೆ ಒಳಗೆ ತಲೆ ಹಾಕಿ ಬೆಚ್ಚಂಗೆ ಕುದ್ದವೆ.

ಕಪಿಗ ಮರದ ಕೊಂಬೆಲಿ ಗುಂಪು ಗುಂಪಾಗಿ ಕುದ್ದ್ ಮಳೆನೋ ಚಳಿನೋ ಅನುಭವಿಸಿಕಂಡ್ ಬೆಳಗ ಮಾಡಿವೆ. ಆದರೆ ಮನುಷ್ಯನ ಬದುಕೇ ಬೇರೆ. ಈ ಹೈದಂಗ ಬೆಳಗಾದರ್ನೇ ಜಪ ಮಾಡ್ತಿದ್ದೊ. ಬೇಕಿತ್ತಾ ಪಿಚ್ಚರ್? ಹೊಟ್ಟೆಗೆ ಅನ್ನನೂ ಇಲ್ಲೆ, ಕಣ್ಣಿಗೆ ನಿದ್ದೆನೂಯಿಲ್ಲೆ. ಥಿಯೇಟರ್‌ಲಿ ಜೋಳದ ಹೊದ್ರಿ ತಿಂದವ್. ಅದ್ ಎಷ್ಟ್ ಗಟ್ಟಿ ಇರ್ದು ಹೇಳಿ? ಹಸಿವು ಮತ್ತೆ ಆಯಾಸ ಆಗಿದ್ದರೆ ಆಕಳಿಕೆ ಜಾಸ್ತಿಗಡ. ಕೆಲವ್ ಆರಾಮಾಗಿ ಹಾಸಿಗೆಲಿ ಮಲ್ಗಿರೂ ಆಕಳಿಸಿಕಂಡ್ ಮಲ್ಗಿವೆ. ಆದರೆ ಸುತಾರಾಂ ಕಣ್ಣಿಗೆ ನಿದ್ದೆ ಹತ್ತುಲೆ. ಅವ್ರ ಕಥೆ ಬುಡಿ, ಇಲ್ಲಿ ಇವ್ರ ಕಥೆ ಕೇಳಿ: ಬೆನ್ನಿಗೆ ಬೆನ್ನ್ ಕೊಟ್ಟ್‌ಕಂಡ್ ಕುದ್ದವುಕೆ ಹಂಞ ಮಂಕ್ ಆದಂಗಾತ್. ಅಷ್ಟೊತ್ತಿಗೆ ಲಟ್‌ಪಟ್ ಲಟ್‌ಪಟ್‌ತ ನಡಿಗೆ ಸದ್ದ್ ಕೇಳ್ದಂಗಾತ್. ಓ, ಮಲ್ಕಂಡಿದ್ದ ದನಗ ಎದ್ದೊಕಂಡದೆತ ಗ್ಯಾನ ಮಾಡಿಕಂಡ್ ಹಂಗೇ ಕುದ್ದಿದ್ದೊ. ಮೈಗೆ ಎಂತದೋ ಕುತ್ತಿದಂಗಾತ್. ದನನೇ ಕುತ್ತುದು ಕಂಡದೆತ ತಲೆಯೆತ್ತಿ ಕಣ್ಣ್ ಉಜ್ಜಿಕಂಡ್ ನೋಡ್ರೆ ಒಬ್ಬ ಪೊಲೀಸ್ ಎದ್ರ ನಿತ್ತುಟು! ಬೂಟ್ ಕಾಲ್, ಖಾಕಿ ಬಟ್ಟೆ, ಕೆಂಪು ತೊಪ್ಪಿ. ಕೈಲಿ ದೊಣ್ಣೆ, ಕುತ್ತಿಗೆಗೆ ಮಫ್ಲರ್ ಸುತ್ತಿಕಂಡಿದ್ದ ಅಂವ ಇವರ್ನ ದಪ್ಪ ದೊಂಡೆಲಿ "ಯಾರ್, ಏನ್, ಎಂತ, ಎಲ್ಲಿ"ತೆಲ್ಲಾ ಪ್ರಶ್ನೆ ಮಾಡ್ತ್. ಆಗ ಇವು ಹಿಂಗೆಂಗೆ ಹಿಂಗೆಂಗೆತ ದೊಂಡೆಂದ ದೊನಿ ಹೊರ್ಟತೋ ಇಲ್ಲೆಯೋತ ತಮ್ಮ ಕಥೆನೆಲ್ಲಾ ಹೇಳ್ದೊ. ಪೊಲೀಸ್ ನಾಕ್ ಬುದ್ಧಿ ಮಾತ್ ಹೇಳ್ತ್. ಮತ್ತೆ ಗುಡಿ ಹೊದ್ದ್ ಮಲ್ಗಿತ್ತಲ್ಲ ಅಂವನ ಕಡೆ ತಿರ್ಗಿ 'ಹೇಯ್'ತ ಹೇಳ್ತ್. ಆಗ ಅಂವ 'ಹಾ' ತೇಳ್ತ್. ಸಾಮಾನ್ಯಾಗಿ ಅಷ್ಟ್ ಹೊತ್ತ್‌ಲಿ ಪೊಲೀಸೇ ಬಾದುತ ಆ ಭಿಕ್ಷದವಂಗೆ ಗೊತ್ತು. ಆ ದೊನಿ ಪರಿಚಯದ ದೊನಿತ ಪೊಲೀಸಿಗೂ ಗೊತ್ತು. ಸರಿ, ಇಂವ ಹಳಬತ ಪೊಲೀಸಿಗೆ ಗೊತ್ತಾತ್. ಪೋಲೀಸ್ ತನ್ನ ಡ್ಯುಟಿ ಮಾಡಿ ಹೋತ್. ತುಂಬ ವರ್ಷಗಳ ಹಿಂದೆ ಪೊಲೀಸ್‌ನವು ತಲೆಗೆ ಹೆಲ್ಮೆಟ್‌ನಂಗೆ ಕೆಂಪು ಪಟ್ಟೆದ್ ಉದ್ದ ತೊಪ್ಪಿ ಹಾಕ್‌ತಿದ್ದೊ. ಹಂಗಾಗಿ ಆಗೆಲ್ಲಾ ಹಳ್ಳಿ ಜನಗ ಪೊಲೀಸ್‌ಗಳ್ನ ಕೆಂಪು ತೊಪ್ಪಿಯವುತ ಕರೆತಿದ್ದೊ.

ಈ ಪೊಲೀಸ್ ಅತ್ತ ಹೋತಿದ್ದಂಗೆ ಇವ್ರ ನಿದ್ದೆ ಪೂರಾ ರಟ್ಟಿತ್. ಆದರೆ ಸಳಿ ಮಾತ್ರ ಹೊಟ್ಟೆ ಒಳಗೆ ನುಗ್ಗಿ ಕರ್‌ಳ್‌ನ ಕೊಣ್‌ಸ್‌ತಿತ್ತ್. ಹಲ್ಲ್ ಕಚ್ಚಿ ಕುದ್ದರೂ ಸನ ಬಾಯಿ ಒಳಗೆ ಸಳಿ ನುಗ್ಗಿ ಕಟಕಟತ ಸದ್ದ್ ಮಾಡ್ತಿತ್. ಮನೆಲಾಗಿದ್ದರೆ ಅವ್ವನ ತಬ್ಬಿಕಂಡ್ ಮಲ್ಗಕಾಗಿತ್ತಲ್ಲ. ಗದ್ದೆ ಪಾರಕ್ಕೆ ಅಟ್ಟಪಾಳಿಲಿ ಮಲ್ಗಿದ್ದರೆ ಕುಂಟೆಗೆ ಬೆಂಕಿ ಹಾಕಂಡ್, ಕೆಂಡ ತಟ್ಟಿಕಂಡ್ ಬೆಂಕಿ ಕಾದ್‌ಕಂಡ್ ಮಲ್ಗಕಾಗಿತ್ತಲ್ಲ,

ಥತ್ ಈ ಪಿಚ್ಚರ್ ಬೇಕಿತ್ತಾ? ಛೇ! ಇನ್ನೂ ಬೆಳಗಾತ್‌ಲೆಲ್ಲಾ.. ಇದ್ ಎಷ್ಟೊಂದ್ ದೊಡ್ಡ ರಾತ್ರೆ. ಒಮ್ಮೆ ಬೆಳಗಾಗಿದ್ದರೆ ಸಾಕಿತಪ್ಪಾತ ಗ್ಯಾನ ಮಾಡಿಕಂಡಿರಕನ ದೂರಲೆಲ್ಲೋ ಕೋಳಿ ಕೂಂಗಿತ್. ಅರೆ! ಪೇಟೆಲೂ ಕೋಳಿ ಸಾಂಕಿವೆನಾ? ಅಷ್ಟೊತ್ತಿಗೆ ಇನ್ನೊಂದ್ ಕಡೆಂದ, ಮತ್ತೊಂದ್ ಕಡೆಂದೆಲ್ಲಾ ಕೋಳಿಗ ಮೂರು ನಾಕ್ ದೊನಿ ಮಾಡಿ ಸುಮ್ಮಂಗಾದೊ. ಕೋಳಿ ಕೂಂಗಿರೂ ಬೆಳಗಾತ್‌ಲೆ. ಬೆಳಗಾಕೆ ಮರ್ತೇ ಹೋತೋತ ಹೇಳ್ವಂಗಾತ್. ಹಿಂಗಿರಕನ ಹೊರಗೆ ರಸ್ತೆ ಕರೆಲಿ ಜನ್ರ ಗುಣು ಗುಣು ಮಾತ್ ಕೇಳ್ದಂಗಾತ್. ಇವು ಕುದ್ದಲ್ಲಿಂದ ಎದ್ದ್ ಹೊರಗೆ ಹೋದೊ. ಆಗ ರಸ್ತೆ ಕರೆಲಿ ಒಂದಿಬ್ಬರ್ ಬೆಂಕಿ ಹಾಕಂಡ್ ಸಳಿ ಕಾಯ್ತಿದ್ದೊ. ಇವ್ಕೂ ಬೇಕಾದ್ದೇ ಅದ್. ಅವ್ರೊಟ್ಟಿಗೆ ಇವೂ ಬೆಂಕಿ ಮುಂದೆ ಕುದ್ದೊ. ಅದ್ ಸೌದೆ ಬೆಂಕಿ ಅಲ್ಲ. ಅಲ್ಲೇ ಎಕ್ಕಡದಂಗ್ಡಿ ಕರೆಲಿದ್ದ ದದ್ದ್ ಟಯರ್‌ಗೆ ಹಾಕಿದ್ದ ಬೆಂಕಿ. ಅದೋ ಹೊಗೆದ್ ಮಾರಿ. ಏನೇ ಇರ್ಲಿ. ಬೆಂಕಿ ನೋಡ್ತಿದ್ದಂಗೆ ಸಳಿ ದೂರಾದಂಗಾತ್. ಇವು ಅಲ್ಲಿ ಇಲ್ಲಿ ಬಿದ್ದ ಕಡ್ಡಿ ಕಾಗದನೆಲ್ಲಾ ತಂದ್ ಬೆಂಕಿಗೆ ಹಾಕಿದೊ. ಬೆಂಕಿ ಕಾದ್‌ಕಂಡ್ ಕುದ್ದೊ. ಬೆನ್ನ್ ಕಾಸಿರೆ ಹೊಟ್ಟೆಗೆ ಸಳಿ, ಹೊಟ್ಟೆ ಕಾಸಿರೆ ಬೆನ್ನ್‌ಗೆ ಸಳಿ. ಕಡೆಗೆ ಬೆಂಕಿ ಪೂರಾ ಕೆಟ್ಟ್ ಹೋತು. ಯಾಗ ಬೆಂಕಿ ಕೆಟ್ಟತೋ ಸಳಿ ತಡೆಕೆ ಬೊತ್ತಾತ್.

ಗೋಣಿಕೊಪ್ಪಲಿ ಪಿಚ್ಚರ್ ನೋಡಿಕೆತ ಹೋದ ಈ ಹೈದಂಗ ಹೆಂಗೋ ಕುದ್ದ್ ನಿತ್ತ್ ಬೆಳಗ ಮಾಡ್ದೊ. ಅತ್ತ ಮೈಸೂರ್ ಕಡೆಗೂ ಇತ್ತ ವಿರಾಜಪೇಟೆ ಕಡೆಗೂ ಉದ್ದೋಕೆ ಮಲ್ಗಿದ್ದ ಗೋಣಿಕೊಪ್ಪದ ರಸ್ತೆಲಿ ಒಂದೇ ಒಂದ್ ವಾಹನದ ಓಡಾಟ ಇಲ್ಲೆ. ನಾಕಾರ್ ಜನ ಮಾತ್ರ ಅತ್ತಿತ್ತ ಓಡಾಡಿಕೆ ಸುರು ಮಾಡಿದ್ದೊ. ಒಂಥರ ಹೊಗೆ ವಾತಾವರಣ ಇದ್ದದರ್‌ಂದ ಆ ಚುಮು ಚುಮು ಬೆಳ್ಕ್‌ಲಿ ಜನಗ ಅತ್ತ ಹೋದೋತಾಗಲಿ, ಇತ್ತ ಬಾದೋತಾಗಲಿ ಗೊತ್ತಾಗ್ತಾ ಇತ್ಲೆ. ಕತ್ತಲೆ ಕತ್ತಲಾಕನ ಮಯ ಮಯ ಬೆಳ್ಕ್ ಇದ್ದದೆ. ಆ ಮಯ ಮಯ ಬೆಳ್ಕ್‌ಲಿ ಎಂತಾರ್ ದಾಟಿರೆ ಸರಿಯಾಗಿ ಗುರ್ತು ಮಾಡಿಕೆ ಆದುಲೆ. ಅದೆಂತದೋ ಆಂಜಿದಂಗಾತ್‌ತ ಹೇಳಿವೆ. ಮತ್ತೆ ಪೂರ್ತಿ ಕತ್ತಲಾದ ಮೇಲೆ ಎಂತನೂ ಕಾಂಬೊದುಲೆ. ಆದರೆ ಬೆಳಗಾಕನ ಚುಮು ಚುಮು ಬೆಳ್ಕ್ ಕ್ರಮೇಣ ಪೂರ್ಣ ಬೆಳ್ಕ್‌ಲಿ ಎಲ್ಲನೂ ಗೋಚರ ಆದೆ. ಈ ಹೈದಂಗ ಗೋಣಿಕೊಪ್ಪದ ಚುಮು ಚುಮು ಬೆಳ್ಕ್‌ಲಿ ರಸ್ತೆನ ನೋಡಿಕಂಡಿರಕನ 'ಕ್ರಾಕ್ರಾ ಕ್ರಾಕ್ರಾ' ತ ದೊನಿ ಕೇಳ್ತ್. ತಲೆಯೆತ್ತಿ ನೋಡ್ರೆ ಹೌದು, ಕರೆಂಟ್ ತಂತಿ ಮೇಲೆ ಜೋಡಿ ಕಾಗೆಗ ಕುದ್ದೊಳೊ.

ಅಯ್ಯೋ ಈ ಕಾಗೆಗಳಿಗೇನಾತ್? ದೊನಿನೂ ಸಣ್ಣದ್. ಬಣ್ಣನೂ ಬೇರೆ. ಬೂದು ಬಣ್ಣದ ಸಣ್ಣ ದೊನಿ ಮಾಡುವ ಇದ್ ಪೇಟೆ ಕಾಗೆತ ಗೊತ್ತಾತ್. ಹಳ್ಳಿ ಕಾಗೆ ಕಪ್ಪು ಕಪ್ಪಾಗಿ ಮಿರ ಮಿರತ ಮಿನ್‌ಗುವೆ. ಒಮ್ಮೆ ದೊನಿ ಮಾಡಿರೆ ಎಷ್ಟೋ ದೂರಕ್ಕೆ ಕೇಳ್ದೆ. ಹಳ್ಳಿ ಕಾಗೆ ಮುಂದೆ ಪೇಟೆ ಕಾಗೆ ಏನೇನೂ ಅಲ್ಲ. ಅಲ್ಲ, ಈ ಪೇಟೆ ಕಾಗೆಗ ಎಲ್ಲಿಂದ ಬಂದದ್? ಪೇಟೆ ಕಟ್ಟಿದ್ ಮುಂದೆನ? ಕಾಗೆ ಬಂದದ್ ಮುಂದೆನ? ಯಾವ್ದ್ ಮುಂದೆ? ಹಳ್ಳಿಲಂತೂ ಪೇಟೆ ಕಾಗೆಗ ಇಲ್ಲೇ ಇಲ್ಲೆ. ಒಂದ್ ಕಾಲಲಿ ಹಳ್ಳಿಯಾಗಿದ್ದದೇ ಇಂದ್ ಪೇಟೆ ಆದ್‌ತನೆ? ಹಿಂಗಿರಕನ ಈ ಪೇಟೆ ಕಾಗೆ ಎಲ್ಲಿಂದ ಬಂದಿರ್ದು? ಅದ್ ಎಲ್ಲಿಂದಾರ್ ಬಂದಿರ಼್. ನಮ್ಮ ಈ ಹೈದಂಗಳ ಪರದಾಟ ನೋಡಿ:

ಮೂಗ್‌ಗೆ ಯಾಗ ತಿಂಡಿದ್ ಗಮ ಗಮ ಬಡ್ತೋ ಇವ್ರ ಕಣ್ಣ್ ಹೋಟೆಲ್ ಕಡೆ ಹೊಣ್ಕಿತ್. ಮುಂದೇ ಇವರ್ದ್ ಹಸ್ದ ಹೊಟ್ಟೆ. ರಾತ್ರೆನೂ ಉಪಾಸ ಇದ್ದವ್. ತಿಂಡಿದ್ ಗಮ ಬಾಕನ ಹಸಿವೂ ಜಾಸ್ತಿ ಆತ್.

ಬಸ್‌ಸ್ಟ್ಯಾಂಡ್ ಎದ್ರ ಇದ್ದ ಹೋಟೆಲ್‌ಗೆ ಹೋದೊ. ಜನಗ ಆಗಳೇ ತಿಂಡಿ ತಿಂಬಕೆ ಕುದ್ದಿದ್ದೊ. ಇವೂ ಒಂದ್ ಕಡೆ ಕುದ್ದೊ. ಹೋಟೆಲಂವ ಇವ್ರ ಮುಂದೆ ಬಂದ್ ಎಂತ ಬೇಕ್‌ತ ಕೇಳ್ತ್. ಎಂತೆಲ್ಲಾ ಉಟ್ಟುತ ಇವು ಕೇಳ್ದೊ. ಆಗ ಅಂವ ಪಟ ಪಟ ಪಟತ ಎಂತೆಲ್ಲೋ ಹೇಳ್ತ್. ಹಂಗೆ ಹೇಳಕನ ಒಂದೋ ಸುರೂನ ಹೆಸ್ರ್ ಇಲ್ಲರೆ ಕಡೇದ್ ಹೆಸ್ರ್ ಮಾತ್ರ ಗೊತ್ತಿದ್ದದೆ. ಇವಂಗೆ ಒಂದೂ ಗೊತ್ತಾಗದೆ ರೊಟ್ಟಿ ಉಟ್ಟಾತ ಕೇಳ್ತ್. ರೊಟ್ಟಿ ಇಲ್ಲೆತ ಅಂವ ಹೇಳ್ತ್. ಮತ್ತೆ ಎಂತೆಲ್ಲಾ ಉಟ್ಟುತ ಮತ್ತೊಮ್ಮೆ ಕೇಳಕನ ಮಸಾಲೆ ದೋಸೆ, ಸೆಟ್ಟ್ ದೋಸೆ, ತುಪ್ಪ ದೋಸೆತ ದೋಸೆದ್ ಪಟ್ಟಿ ಕೊಟ್ಟತ್. ಇವು ತುಪ್ಪ ದೋಸೆ ಬೇಕ್‌ತ ಹೇಳ್ದೊ. ಅಂವ ಒಂದೊಂದ್ ದೋಸೆನೂ ಇಷ್ಟ್ ಕಾಯಿಪಜ್ಜಿನೂ ಇಬ್ಬರ ಮುಂದೆ ತಂದ್ ಇಸಿತ್. ಇವು ಆಚೆವ್ರ ಈಚೆವ್ರ ಕೈ ಬಾಯಿ ನೋಡಿಕಂಡ್ ದೋಸೆ ತಿಂದೊ. ಆ ದೋಸೆದ್ ರುಚಿ ಗೊತ್ತಾಕೆ ಮುಂದೇ ದೋಸೆ ಕಾಲಿ ಆತ್. ತುಪ್ಪದ ಪಸೆ ಕೈಗೆಲ್ಲಾ ಆತ್. "ಅಣ್ಣಾ, ಬರೀ ಒಂದೇ ದೋಸೆನಾ"ತ ಈ ಹೈದ ಕೇಳ್ತ್. ಹೌದು, ಒಂದೇ ದೋಸೆ. "ಅಣ್ಣಾ ಇನ್ನೊಂದ್ ಬೇಕಿತ್ತಣ್ಣಾ"ತ ಸಣ್ಣ ದೊನಿಲಿ ಕೇಳ್ತ್. ಇಲ್ಲೆ. ಅಷ್ಟಕ್ಕೆ ದುಡ್ಡಿಲ್ಲೆತ ಇವ್ನ ಬಾಯಿ ಮುಚ್ಚಿಸಿತ್. ಮನೆಲಾಗಿದ್ದರೆ ಅವ್ವ ದೋಸೆ ಹೊಯ್ದ್ ಚೆಬ್ಬುಲ್‌ಲಿ ಅಟ್ಟಿ ಅಟ್ಟಿ ಇಸ್ತಿತ್. ಹೊಟ್ಟೆ ತುಂಬುವಷ್ಟ್ ದೋಸೆ ಲಗಾಯಿಸ್‌ತಿದ್ದ ಹೈದಂಗೆ ಈ ಒಂದೇ ಒಂದ್ ದೋಸೆ

ಎಲ್ಲಿಗೆತ್ತಿದೆ? ಸರಿ, ಮತ್ತೆ ಇವು ಚಾಯ ಬೇಕ್‌ತ ಹೇಳ್ದೊ. ಚಾಯ ಕುಡ್ದ್ ಎದ್ದೊ. ಬಿಲ್ಲ್ ಎಷ್ಟಾಗಿರ್ದುದ್? ಬರೀ ಎಂಟಾಣೆ! ಒಟ್ಟ್ ಮಾಡಿ ದುಡ್ಡ್ ಕೊಟ್ಟ್ ದುಂಡು ಪೂಜಿಕಂಡ್ ಹೋಟೆಲ್‌ಂದ ಹೊರಗೆ ಬಂದೊ. ಒಂದೊಂದು ಕಾಸಿಗೂ ಬೆಲೆ ಇದ್ದ ಕಾಲ ಅದ್.

ಹೋಟೆಲ್‌ತೇಳ್ಕನ ಹೋಟೆಲ್‌ಗಳ್‌ಂದ ಬರುವ ಅಡುಗೆದ್ ಗಮ್ ಗಮಾ ಪರಿಮಳದ ಆ ಗಾಳಿನ ಕುಡ್ಕಂಡ್ ಅಲ್ಲೇ ನಿತ್ತ್‌ಕಂಬದೇ ಒಂದ್ ಮಜ. ಮೀನ್ ಗೈಪು, ಹೊರ್ದ ಮೀನ್, ಮಾಸ ಗೈಪು, ಆಮ್ಲೆಟ್, ದೋಸೆ, ಉಪ್ಪಿಟ್ಟ್, ವಡೆ ಹಿಂಗೆ ಎಂತೆಂತದೋ ಹೊರ್ದ ಗಮ ಹೋಟೆಲ್ ಮುಂದೆ ದಾಟಕನ ಮೂಗಿಗೆ ಬಡ್ದರೆ ಏನ್ ಮಾಡ್ದು? ದುಡ್ಡಿದ್ದರೆ ಹೋಗಿ ತಿಂಬೊದು, ದುಡ್ಡಿಲ್ಲರೆ ಅಲ್ಲೇ ಹೊರಗೆ ನಿತ್ತ್ ಗಮನ ಕುಡ್ಕಂಡ್ ಬಾದೇ ಒಳ್ಳ ಉಪಾಯ.

ಹ್ಹಾ! ದುಂಡ್ ಪೂಜಿಕಂಡ್ ಹೊರಗೆ ನಿತ್ತ ಈ ಹೈದಂಗ ಲಾರಿ ಹತ್ತಿ ಊರಿಗೆ ಹೊರ್ಟೊ. ಈ ಪಡ್ಡೆ ಹೈದನ ಗೋಳು ಹೇಳ್ದು ಬೇಡ. ರಾತ್ರೆ ನಿದ್ದೆಯಿಲ್ಲೆ. ಹೊಟ್ಟೆಗೆ ಸರಿ ಊಟ ಇಲ್ಲೆ. ಹೊತ್ತ್ ನೆತ್ತಿಗೇರಿಕಂಡ್ ಬಾಕನ ಮೀನ್‌ಗೆ ಮದ್ದ್ ಹಾಕಿರೆ ಮಂಕಾಗಿ ನೀರ್ ಮೇಲೆ ತೇಲುವಲ್ಲ, ಹಂಗೆ ಇವಂಗೆ ತೇಲುವಂಗೆ ಆಗ್ತಾ ಇತ್ತ್. ಲಾರಿ ಇಳ್ದ್ ಮನೆಕಡೆ ನಡ್ದೊ. ಅಲ್ಲಿ, ಮನೆಗೆತ್ತಿದಂಗೆ ಇವಂಗೆ ಸಮಾ ಬೊಯ್ದೊ. ಹಂಗೆ ಬಯ್ಸಿಕಂಡ್ ಮೀದ್ ಉಂಡ್ ಮಲ್ಗಿತ್.

ಮಾರ್ನೆ ದಿನ ಇಸ್ಕೂಲಿಗೆ ಹೋಕು. ಇವಂಗೆ ಏಳಿಕೆ ಆಗ್ತಾ ಉಟ್ಟಾ? ಇಲ್ಲೆ, ಏಳಿಕೆ ಆಗ್ತಾನೆ ಇಲ್ಲೆ. ಜರ ಜರ ಜರ! ವಾರಗಟ್ಟಲೆ ಇಸ್ಕೂಲಿಗೆ ಹೋಕೇ ಆತ್ಲೆಗಡ. ನೀವಿಗೂ ಇಂತಾ ಅನುಭವ ಇಲ್ಲರೆ ಇದ್ಕಿಂತ ದೊಡ್ಡ ಅನುಭವ ಆಗಿರ್ದು. ಇನ್ನ್ ಮುಂದೆ ಇಂತ ಸಾಸ ಮಾಡಿಕಿಲೆತ ಗ್ಯಾನ ಮಾಡಿರೂ ಸನ ರಾತ್ರೆ ನಿದ್ದೆ ಕೆಡುವ ಸಂದರ್ಭ ಬಂದಿರ್ದು. ಮೊದುವೆ ಚಪ್ಪರದಂದ್ ರಾತ್ರೆ ನಿದ್ದೆ ಕೆಟ್ಟದ್, ರಾತ್ರೆ ದಸರಾ ನೋಡಿಕೆ ಹೋದ್, ಯಕ್ಷಗಾನ ನೋಡ್ದ್ ಅದಿಲ್ಲರೆ ಶಿವರಾತ್ರೆಯಂದ್ ರಾತ್ರೆ ಇಡೀ ಮನೆ ಮನೆ ಸುತ್ತಿದ ನೀವ್‌ಗೆ ಅಂದ್‌ನ ಆ ದಿನ ಗ್ಯಾನ ಆಗದೆ ಇರಿಕಿಲೆ. ಕಳ್ದ ದಿನಗಳ್ನ ಗ್ಯಾನ ಮಾಡಿಕಂಬದೇ ಒಂದ್ ರೀತಿ ದುಃಕಂತೇಳ್ರೆ ದುಃಕ, ಸಂಕಟತೇಳ್ರೆ ಸಂಕಟ, ಸುಕತೇಳ್ರೆ ಸುಕ!

* * * * *

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅಧ್ಯಕ್ಷರು

**ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**

**ಸದಸ್ಯರು**

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ

ಶ್ರೀಮತಿ ಸ್ಮಿತಾ ಅಮೃತರಾಜ್

ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ

ಶ್ರೀ ಧನಂಜಯ ಅಗೋಳಿಕಜೆ

ಶ್ರೀ ದಂಬೆಕೋಡಿ ಎಸ್. ಆನಂದ

ಡಾ. ಕೂಡಕಂಡಿ ದಯಾನಂದ

ಶ್ರೀ ಕುಸುಮಾಧರ ಎ.ಟಿ.

ಡಾ. ವಿಶ್ವನಾಥ ಬದಿಕಾನ

ಶ್ರೀ ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ

ಶ್ರೀ ಪುರುಷೋತ್ತಮ ಕಿರ್ಲಾಯ

ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು

ಶ್ರೀ ಕಿರಣ್ ಕುಂಬಳಚೇರಿ

ಶ್ರೀ ಭರತೇಶ ಅಲಸಂಡೆಮಜಲು

ರಿಜಿಸ್ಟ್ರಾರ್

**ಶ್ರೀ ಚಿನ್ನಸ್ವಾಮಿ**

## ಶ್ರೀ ಬಾರಿಯಂಡ ಜೋಯಪ್ಪ



ಇವು ಮಡಿಕೇರಿ ತಾಲೂಕ್‌ನ ಮದೆನಾಡವು. ಶ್ರೀಯುತರ್ ಮದೆ ಮಹೇಶ್ವರ ಪ.ಪೂ. ಕಾಲೇಜ್‌ನ ಪ್ರೌಢ ಇಸ್ಕೂಲ್‌ಲಿ ಮುಖ್ಯ ಶಿಕ್ಷಕರಾಗಿ ಮತ್ತೆ ಅದೇ ಕಾಲೇಜ್‌ನ ಪ್ರಾಂಶುಪಾಲರಾಗಿ ನಿವೃತ್ತರಾದವು.

ಜೋಯಪ್ಪನವು ಹಲವ್ ಪುಸ್ತಕಗಳ್ನ ಬರ್ದೊಳೊ. ಇವು ಕನ್ನಡಲಿ ಬರ್ದ 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು' ಪುಸ್ತಕ 1998ರ್‌ಲಿ ಪ್ರಕಟ ಆತ್. ಅರೆಬಾಸೆಲಿ ಬರ್ದ 'ಚಾಂಪಾ'ಕಥಾ ಸಂಕಲನ 2003ರ್‌ಲಿ ಪ್ರಕಟ ಆತ್. ಆ ಪುಸ್ತಕ ಅರೆಬಾಸೆ ಸಾಹಿತ್ಯಲೇ ಪ್ರಕಟ ಆದ ಸುರೂನ ಕತೆ ಪುಸ್ತಕತ ಹೆಸ್ರ್ ಪಡ್ದುಟು. 2016ರ್‌ಲಿ ಅರೆಬಾಸೆಲಿ 'ತೋರಣ'ತ್ತೇಳುವ ಕವನ ಸಂಕಲನ ಪ್ರಕಟ ಆತ್. ಆ ಪುಸ್ತಕಲಿ ಬರ್ದ 'ತ್ರಿಪದಿ'ಗ ಅರೆಬಾಸೆ ಸಾಹಿತ್ಯಕ್ಕೆ ಸುರೂನ ಕೊಡುಗೆತ ದಾಕಲಾಗುಟು. 2018ರ್‌ಲಿ ಕನ್ನಡಲಿ ಬರ್ದ 'ಸಾಧಕರ ಹೆಜ್ಜೆಗಳು', 2019ರ್‌ಲಿ 'ಕಾಟಿಬೆಟ್ಟದ ಕತೆಗಳು' ಪುಸ್ತಕ, 2020ರ್‌ಲಿ 'ಬದುಕು'ತ್ತೇಳುವ ಪರಿಸರ ಕತೆ ಪುಸ್ತಕ ಪ್ರಕಟ ಆಗುಟು.

ಇದೀಗ ಅರೆಬಾಸೆಲಿ ನಮ್ಮ ಬದ್ಕ್‌ನ ಸಂಗತಿಗಳ ಕುರ್ತ್ ಬರ್ದ 'ಚೆಂಚಿ'ತ್ತೇಳುವ ಪುಸ್ತಕ ಅರೆಬಾಸೆ ಸಾಹಿತ್ಯಕ್ಕೆ ಹೊಸ ಕೊಡಿಕೆ.

ಅರೆಬಾಸೆ ಪದಮಾಲೆ ಸರಣಿಲಿ 'ಜೋಡಿ ಹಕ್ಕಿಗ' ಮತ್ತೆ 'ಉದಯರಾಗ' ತ್ತೇಳುವ ಪದ್ಯ ಅಲ್ಲದೆ, 'ನಿತ್ತ ಮರ ಬಿದ್ದ ಕತೆ'ತ್ತೇಳುವ ಕತೆ ಯುಟ್ಯೂಬ್‌ಲಿ ಪ್ರಸಾರ ಆಗ್ತಾ ಉಟ್ಟು.

ಶ್ರೀಯುತ ಜೋಯಪ್ಪನವ್ಕೆ 1996ರ್‌ಲಿ ಉತ್ತಮ ಶಿಕ್ಷಕ ಜಿಲ್ಲಾ ಪ್ರಶಸ್ತಿ, 2008ರ್‌ಲಿ ಕರ್ನಾಟಕ ರಾಜ್ಯ ಉತ್ತಮ ಶಿಕ್ಷಕ ಪ್ರಶಸ್ತಿ, ಅದೇ ವರ್ಷ ಜಿಲ್ಲಾ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯ ಗೌರವ ಸಿಕ್ಕಿಟು.

2013ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಶ್ರೀಯುತರಿಗೆ ಗೌರವ ಪ್ರಶಸ್ತಿ ಕೊಟ್ಟ್ ಸನ್ಮಾನಿಸಿ ಗೌರವ ಕೊಟ್ಟುಟು.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

**ಮಡಿಕೇರಿ.**

ರೂ. 100/-